# ತಿರುಮಲೆ - ತಿರುಪತಿ ದೇವಸ್ಥಾನಗಳು, ತಿರುಪತಿ.




# ಬರ್ಡ್

## ಸಾರ್ಥಕ ಸೇವೆಯ ಆದರ್ಶ :

ಅಂಗವಿಕಲರ ಪುನರಾವಾಸ, ಪರಿಶೋಧನೆ, ಶಸ್ತ್ರಚಿಕಿತ್ಸೆಗಳ ಬಾಲಾಜಿ ಆಸ್ಪತ್ರೆಯು (ಬಾಲಾಜಿ ಇನ್‌ಸ್ಟಿಟ್ಯೂಟ್ ಆಫ್ ಸರ್ಜರಿ ರಿಸರ್ಚ್ ಅಂಡ್ ರಿಹ್ಯಾಬಿಲಿಟೇಷನ್ ಫಾರ್ ದಿ ಡಿಸೇಬಲ್ಡ್) ಮಾನವ ಸೇವೆಯ ಮೂಲಕ ಮಾಧವ ಸೇವೆಯನ್ನು ನಡೆಸುವ ತಿ ತಿ ದೇವಸ್ಥಾನಗಳ ಆದರ್ಶ ಪಂತಿಕೆಗೆ ಸಾಕ್ಷಿಯಾಗಿ ಅಂಗವಿಕಲರ ಸೇವೆಯಲ್ಲಿ ನಿರತವಾಗಿದೆ.

1985 ರಲ್ಲಿ ಸ್ಥಾಪನೆಯಾದ ಬರ್ಡ್ ಸಂಸ್ಥೆ ಅಂಗ ರಚನಾ ಶಾಸ್ತ್ರ ಕ್ಷೇತ್ರದಲ್ಲಿ ಹಲವು ರೀತಿಯ ಹೊಸ ಹಾದಿಗಳನ್ನುಂಟುಮಾಡಿದೆ ಪೋಲಿಯೊ ಪೀಡಿತರು, ಜನ್ಮಾರಭ್ಯ ನ್ಯೂನತೆಗಳು, ಮಿದುಳ ಪಕ್ಷವಾತಗಳ ಮೂಲಕ ವಿಕಲಾಂಗರಾದ ರೋಗಿಗಳಿಗೆ ಉತ್ತಮವಾದ ಚಿಕಿತ್ಸೆಯನ್ನು ನೀಡುವ ಈ ಆಸ್ಪತ್ರೆ ಬಡ ಜನತೆಯ, ಅಗತ್ಯವಿದ್ದವರ ಸೇವೆಯಲ್ಲಿ ಸಮರ್ಪಿತವಾಗಿದೆ

## ಬರ್ಡ್‌ನ ಕೆಲವು ಸಾಧನೆಗಳು, ಅಗತ್ಯಗಳು, ಅನುಕೂಲಗಳು.

* ಬೆನ್ನು ಹುರಿಯ ಘಾಯದ ಚಿಕಿತ್ಸೆಯಲ್ಲಿ ಸದಾಸಿದ್ಧ ಯಂತ್ರೋಪಕರಣಗಳ ಬಳಕೆ
* ಎರಡು ಲಕ್ಷಕ್ಕೂ ಹೆಚ್ಚು ಮಂದಿಯ ಸಫಲ ಚಿಕಿತ್ಸೆಯಾಗಿದೆ
* 300 ಒಳರೋಗಿಗಳ ಹಾಸಿಗೆಗಳ ಚಿಕಿತ್ಸೆಗೆ ಅವಕಾಶವಿರುವ ಕೇಂದ್ರೀಕೃತ ಹವಾನಿಯಂತ್ರಿತ ಆಸ್ಪತ್ರೆ, ನಾಲ್ಕು ಶಸ್ತ್ರ ಚಿಕಿತ್ಸಾ ಕೋಣೆಗಳು
* ಕೃತಕ ಅಂಗಾಂಗಳ, ಆಧಾರಗಳ, ಆಲಂಬನಗಳ ಉಚಿತ ವಿತರಣೆ
* ಬರ್ಡ್‌ಗಾಗಿ ನೀಡುವ ಎಲ್ಲ ದಾನಗಳೂ ಆದಾಯಕರ ನಿಯಮದ 80 (ಜಿ) ಕಲಮಿನ ಪ್ರಕಾರ ಆದಾಯ ಕರಮುಕ್ತವಾಗಿರುವುವು.
* ಐದು ಲಕ್ಷರೂಪಾಯಿ ಹಾಗೂ ಹೆಚ್ಚಿಗೆ ದಾನ ನೀಡಿದವರ ಹೆಸರಿನೊಡನೆ ಇರುವ ಭಾವಚಿತ್ರವನ್ನು ಬರ್ಡ್ ಆಸ್ಪತ್ರೆಯಲ್ಲಿ ಪ್ರದರ್ಶಿಸಲಾಗುವುದು
* ವರ್ಷಕ್ಕೆ ಒಮ್ಮೆ ಮೂರುದಿನ ದಾನಿಗಳ ಐದುಮಂದಿಗೆ ತಿರುಮಲೆಯಲ್ಲಿ ಉಚಿತದರ್ಶನ, ಸ್ವಾಮಿಯ ಆರತಿ ನೀಡಲಾಗುವುದು
* ಹತ್ತುಲಕ್ಷ ರೂಗಳು ಹಾಗೂ ಹೆಚ್ಚಿನ ದಾನ ನೀಡುವವರ ಹೆಸರನ್ನು ಒಂದು ಕೋಣೆಗೆ ಇಡಲಾಗುವುದು
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಬೆಳ್ಳಿಯ ಚಿತ್ರದ ಜ್ಞಾಪಿಕೆಯನ್ನು ಐದು ಲಕ್ಷ, ಹತ್ತು ಲಕ್ಷ ರೂಪಾಯಿಗಳ ದಾನಿಗಳಿಗೆ ನೀಡಲಾಗುವುದು

ದಾನಿಗಳು ಉದಾರವಾಗಿ ನೀಡುವ ದಾನಗಳನ್ನು ಬರ್ಡ್‌ನ ವಿವಿಧ ಯೋಜನೆಗಳಲ್ಲಿ ತೊಡಗಿಸಲಾಗುವುದು ಕೃತಕ ಅಂಗಾಂಗಗಳ ಉತ್ಪಾದನೆ ವಿತರಣೆಗೆ, ರೋಗಿಗಳ ಉಚಿತ ಭೋಜನ ರಿಯಾಯಿತಿ ದರಗಳ ಪ್ರಯಾಣ ವೆಚ್ಚಗಳಿಗೆ ಬಳಸಲಾಗುವುದು ದಾನಗಳನ್ನು ಕಾರ್ಯನಿರ್ವಹಣಾಧಿಕಾರಿ, ಬರ್ಡ್ ಟ್ರಸ್ಟ್, ತಿ ತಿ ದೇವಸ್ಥಾನಗಳು, ತಿರುಪತಿ - ಇವರ ಹೆಸರಿಗೆ ಕಳುಹಿಸಬಹುದು



ಕಾರ್ಯನಿರ್ವಹಣಾಧಿಕಾರಿ,

ತಿ ತಿ ದೇವಸ್ಥಾನಗಳು, ತಿರುಪತಿ - 517 501



ಅರಿದರಿದು ಮತಿಗೆಟ್ಟ ಮಾನವ
ಕುರಿಯಲಾ ನೆರೆಕಂಡು ಕಂಡೆ
ಜ್ವರದ ಖೂಳನಲಾ ವಿವೇಕದ ಮೂಗು ಮಾರಿಯಲ
ಬರಿ ಮನದ ಬಾಹಿರನೊಳಿನ್ನಲಿ
ಮರೆವುದ ಪರಾದವನು ನಿನ್ನನೆ
ಮೆರೆವುದೈ ಕಾರುಣ್ಯ ನಿಧಿ ಕೈಗಾಯದೇಕೆಂದ

ದೇವ ದೇವ ಕೃಪಾಂಬುನಿಧಿ ಭ
ಕ್ತಾವಲಂಬನ ಭಕ್ತದೇಹಿಕ
ಸೇವಕ ಪ್ರಿಯ ಭೂತಭಾವನ ಭಾವನಾತೀತ
ದೇವ ಪಂಡಿತ ಕಾಲರೂಪ ಮ
ಹಾವಿಭವ ಭವರಹಿತ ಪಾವನ
ಪಾವಕಾಂಬಕ ಸತಿಕುಟುಂಬಿಕ ಕರುಣಿಸುವುದೆಂದ

**- ಕುಮಾರವ್ಯಾಸ.**




**ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ,**
**ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ**


ಸಂಪುಟ 29 ಫೆಬ್ರವರಿ 1999 ಸಂಚಿಕೆ - 9




ಮುಖಚಿತ್ರ ಶ್ರೀ ಕಾಮಾಕ್ಷೀ ಸಹಿತ ಶ್ರೀ ಕಪಿಲೇಶ್ವರಸ್ವಾಮಿ ಉತ್ಸವಮೂರ್ತಿ ಕಪಿಲತೀರ್ಥ, ತಿರುಪತಿ
ಹಿಂಬದಿಯಲ್ಲಿ ಶ್ರೀ ರಾಮಕೃಷ್ಣ ಮಂದಿರ - ತಿರುಪತಿ



ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ ತಿ ದೇ ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ 4-00**
**ವಾರ್ಷಿಕ ಚಂದಾ 48-00**




ಕತ್ತಲು ಎನ್ನುವ ಅನುಭವ ತೀವ್ರವಾಗುತ್ತಿರುವಂತೆ ಬೆಳಕು ಮೂಡುವುದು ಸಹಜ ಪ್ರಕೃತಿ ವ್ಯಾಪಾರ ಎನ್ನಬಹುದೇನೊ ಯಾರು ತಡೆಯುವುದರಿಂದ ಬೆಳಗಾಗುವುದು ನಿಲ್ಲುತ್ತದೆ ಎಂಬುದು ಹಿಂದಿಯ ಒಂದು ನಾಣ್ನುಡಿ ಇಲ್ಲಿ ಬೆಳಗಾಗುವುದು ಅನಿವಾರ್ಯವೆಂದೂ ಹೇಳಲಾಗಿದೆ ರಾತ್ರಿ ಮಾತ್ರದ ಅತಿಥಿ ಅಂಧಕಾರ ಎಂದು ಆರಂಭ ಇದೇ ಪ್ರಕೃತಿಸೂತ್ರವನ್ನು ಒಳಗಡೆಗೂ ತಿರುಗಿಸಬಹುದೆನ್ನುವುದು ಜಗತ್ತಿನ ಇತಿಹಾಸದಲ್ಲಿ ಸ್ಪಷ್ಟವಾಗಿ ಕಂಡುಬರುವ ಸಂಗತಿ ಎಲ್ಲೆಲ್ಲ ಅಜ್ಞಾನ ಅಂಧಕಾರಗಳು ತುಂಬುವುದೋ ಅಲ್ಲೆಲ್ಲ ಆಯಾಕಾಲಗಳಲ್ಲಿ ಅತಿಮಾನುಷ ವ್ಯಕ್ತಿತ್ವಗಳು ತಲೆದೋರಿ ಸುತ್ತಲಿನ ಕತ್ತಲೆಯನ್ನು ಕಿತ್ತೊಗೆದು - ತಿಳಿವಿನ ತಂಪನ್ನು, ಅರಿವಿನ ಇರವನ್ನು ಹೊಳೆಯುವ ಬೆಳಕನ್ನು - ಹರಿಸಿ ಹಾರೈಸಿ ಮನುಕುಲಕ್ಕೆ ದಾರಿತೋರಿಸಿದ್ದಾರೆ ಶಂಕರ ರಾಮಾನುಜ ವಿದ್ಯಾರಣ್ಯರಂತೆಯೇ ರಮಣ, ವಿವೇಕಾನಂದ, ಅರವಿಂದರುಗಳೂ ದಾರಿದೀಪಗಳೇ ಹೌದು

ಇಂತಹವರ ನಡುವೆ ಬಂಗಾಳದ ರಾಮಕೃಷ್ಣ ಪರಮಹಂಸರು ಕಂಡುಬರುತ್ತಾರೆ ಕಾಳಿಮಾತೆಯ ಅದ್ವಿತೀಯ ಭಕ್ತರೂ, ಅಚಂಚಲ ಸಹಾನುಭೂತಿ ಪರರೂ ಆಗಿ ಸುತ್ತಲವರಿಗೆ ಸದಾ ಬೆಳಕಾಗಿ ನಡೆದ ಯುಗಪುರುಷ

ಯುಗಪುರುಷ ಎಂದಾಗಲೇ ರಾಮಕೃಷ್ಣರು ಬೆಳಕು ಚೆಲ್ಲಿದ ಹೆದ್ದಾರಿಯ ಪರಿಸ್ಥಿತಿ ಅವರಿಗಿಂತ ಮುನ್ನ ಹೇಗೆ ಅಂಧಕಾರದಲ್ಲಿದ್ದಿತು ಎಂಬುದರ ಕಲ್ಪನೆ ಉಂಟಾಗಲು ಸಾಧ್ಯ ಭಾರತೀಯ ಸಮಾಜ ನಡುಗಾಲದ ನಿಡು ನಿದ್ದೆಗೊಳಗಾಗಿ, ಸನಾತನಧರ್ಮ ಕಾಲದೋಷದಿಂದ ಕಸುವು ಕಳೆದುಕೊಂಡಿರಲು, ವಿದೇಶೀ ಸಂಸ್ಕೃತಿ, ಸಾಹಿತ್ಯ ನಿದ ನಿದಾನವಾಗಿ ಭಾರತೀಯತೆಯ ಬೇರುಗಳನ್ನು ಕಬಳಿಸುತ್ತಿರಲು, ರಾಮಕೃಷ್ಣ ಪರಮಹಂಸರು ಭಾರತದ ಪೂರ್ವ ದಿಗಂತದಲ್ಲಿ ಕಾಣಿಸಿಕೊಂಡ ನವಯುಗ ವೈತಾಳಿಕರಾದರು ಹೊಸ ಬೆಳಕಾದರು ತಾವು ನಡೆದ ಸಾಧನಾಮಾರ್ಗದಲ್ಲಿ ತಮ್ಮ ಶಿಷ್ಯರನ್ನೂ ಕರೆದೊಯ್ದು ಹೊಸ ಪುನರುತ್ಥಾನಕ್ಕೆ ನಾಂದಿ ಹಾಡಿದರು

ರಾಮಕೃಷ್ಣ ಪರಮಹಂಸರ ಸಾಧನಾ ಜೀವನ ಅವರನ್ನು ಹಲವು ಮತಗಳ ತತ್ವಗಳ ತಳವನ್ನು ಶೋಧಿಸುವಂತೆ ಮಾಡಿತು. ಪರಿಣಾಮವಾಗಿ ಸರ್ವಧರ್ಮ ಸಮನ್ವಯವೂ ಸಾಧ್ಯವಾಯಿತು ಮತಿಯಂತೆ ಮತ, ಮತವೆಷ್ಟೊ ಅಷ್ಟೇ ಮಾರ್ಗಗಳು ಮುಕ್ತಿಗೆ ಎಂಬುದನ್ನು ಅವರು ಕಂಡುಕೊಂಡಂತೆಯೇ ಇತರರಿಗೂ ಮನಗಾಣಿಸಿದರು ಇದರಿಂದಾಗಿ ಭಾರತೀಯ ಜೀವನದಲ್ಲಿ ಒಂದು ಹೊಸ ಹೊಗರು ಕೂಡಿಬಂದು, ಮುಕ್ತಿ ಪಥದನ್ವೇಷಣೆಯಲ್ಲಿ ಹೊಸ ಸಾಧ್ಯತೆಗಳನ್ನು ಕಂಡುಕೊಳ್ಳಲಾಯಿತೆಂಬುದೂ, ಜೊತೆಗೇ ಸಮಾಜ ಜೀವನದಲ್ಲಿ ಸೋದರ ಭಾವನೆ ಬೆಳೆಯಿತೆಂಬುದೂ ಈಗ ಇತಿಹಾಸವಾಗಿರುವ ಸಂಗತಿಗಳು ಸಹನೆ, ಸೋದರತೆಗಳನ್ನು ಪಸರಿಸುವುದರಲ್ಲಿ ಪರಮಹಂಸರ ಪದ್ಧತಿ ಮುಂದಿನವರಿಗೆ ಮಾರ್ಗದರ್ಶಿಯಾಯಿತು

ಕಾಳಿಯ ಆರಾಧನೆಯಲ್ಲಿ, ಆಧ್ಯಾತ್ಮಿಕ ಚಿಂತನೆಯಲ್ಲಿ, ತೊಡಗಿದ ರಾಮಕೃಷ್ಣರು ತಮ್ಮ ಜೀವನದಿಂದ ಮಾತ್ರವೇ ಅಲ್ಲದೆ ಮಾತೆ ಶಾರದಾದೇವಿ ಹಾಗೂ ಶಿಷ್ಯರಾದ ನರೇಂದ್ರ ಮತ್ತಿತರ ಮೂಲಕವಾಗಿಯೂ ಭಾರತೀಯ ಸಮಾಜವನ್ನು ಸುಧಾರಿಸಿದರು ಶಾರದಾದೇವಿ ಎಂದಾಗ ಮಾತೆ ಎಂಬ ಮಾತು ಅಪ್ರಯತ್ನವಾಗಿ, ಹೃದಯದಾಳದಿಂದ ಹೊರಹೊಮ್ಮಲು ಕಾರಣ ಭಾರತೀಯ ಸಂಸ್ಕಾರ ಮಾತ್ರವೇ ಅಲ್ಲ, ರಾಮಕೃಷ್ಣ ಪರಮಹಂಸರ ಶಿಕ್ಷಣವೂ ಕಾರಣವೇ ಪರಮಹಂಸರೇ ಹಾಕಿ ಕೊಟ್ಟ ಮಾರ್ಗ ಮುಂದಿನವರಿಗೆ ಗಜಬಟ್ಟೆಯಾಯಿತು ಹೆಂಗಸಿನ ಬಗ್ಗೆ ಗೌರವ ಸಮಾಜದಲ್ಲಿ ಮೂಡಿಬರಲು ಹೊಸ ಪ್ರೋತ್ಸಾಹವಾಯಿತು

ರಾಮಕೃಷ್ಣ ಪರಮಹಂಸರು ತಮ್ಮ ಆಚಾರ ವಿಚಾರ ಆದರ್ಶ ಪ್ರಚಾರಗಳಿಂದ ಅಂದಿನ ಸಮಾಜಕ್ಕೆ ಅಭ್ಯುತ್ಥಾನ ಪಥವನ್ನು ತೋರಿದ್ದಷ್ಟೇ ಅಲ್ಲ, ಅವರ ಕೊಡುಗೆಯ ಔನ್ನತ್ಯದ ಶಿಖರವೆಂದರೆ ಅದು ಸ್ವಾಮಿ ವಿವೇಕಾನಂದ ಎಲ್ಲವನ್ನೂ ಪ್ರಶ್ನಿಸುವ ನರೇಂದ್ರನನ್ನು ಸನಾತನ ಧರ್ಮದ ಅತ್ಯಮೋಘ ಮಾದರಿಯನ್ನಾಗಿ ತಿದ್ದಿ ಜಗತ್ತಿಗೆ ನೀಡಿದ ಕೀರ್ತಿ ಕಾರ್ಯ ರಾಮಕೃಷ್ಣ ಪರಮಹಂಸರದು ಎಂತಲೇ ಅವರು ಪ್ರಾತಃಸ್ಮರಣೀಯರು

ಸ್ಥಾಪಕಾಯ ಚ ಧರ್ಮಸ್ಯ ಸರ್ವ ಧರ್ಮ ಸ್ವರೂಪಿಣೇ
ಅವತಾರ ವರಿಷ್ಠಾಯ ರಾಮಕೃಷ್ಣಾಯ ತೇ ನಮಃ ||



# ವಾರ್ತಾಲಹರಿ

## ಹೊಸ ಕಾರ್ಯನಿರ್ವಹಣಾಧಿಕಾರಿ ಪ್ರಮಾಣ ವಚನ ಸ್ವೀಕಾರ

ತಿರುಮಲೆ - ತಿರುಪತಿ ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿಯಾಗಿ ಡಾ|| ಇಲಪಾವುಲೂರಿ ವೆಂಕಟಸುಬ್ಬಾರಾವ್ ಐ ಎ ಎಸ್ ಅವರು 1999 ರ ಜನವರಿ 1 ರಂದು ಮಧ್ಯಾಹ್ನ 12 ಗಂಟೆಯ ಹೊತ್ತಿನಲ್ಲಿ ಪ್ರಮಾಣ ವಚನ ಸ್ವೀಕರಿಸಿದರು ತಿರುಮಲೆಯ ಆಲಯದ ಬಂಗಾರದ ಬಾಗಿಲಿನ ಬಳಿ, ಸ್ವಾಮಿಯ ಎದುರಿಗೆ ಡಾ|| ವೆಂಕಟಸುಬ್ಬಾರಾವ್ ಅವರಿಗೆ ಪ್ರಮಾಣ ವಚನವನ್ನು ತಿ ತಿ ದೇ



ಜ ಇ ಓ ಶ್ರೀ ಬಾಲಸುಬ್ರಹ್ಮಣ್ಯಂ ಅವರು ನೀ
ದರು

ಈ ಮುಂಚೆ ಚೆನ್ನೈನಿಂದ ಬಂದ ಶ್ರೀಯು
ತರು ಸಕುಟುಂಬರಾಗಿ ತಿರುಮಲೆಯನ್ನು ಸೇ
ಆಲಯ ಸಂಪ್ರದಾಯದಂತೆ ಶ್ರೀ ವರಾಹಸ್ವಾ
ಯನ್ನು ಸಂದರ್ಶಿಸಿದರು ತಿರುಮಲೆಯ ಕ್ಯಾಂ
ಆಫೀಸಿನಲ್ಲಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ
ಆರ್ ವಿನಾಯಕ್ ಅವರಿಂದ ಪದವಿ ಬಾಧ್ಯ
ಳನ್ನು ಸ್ವೀಕರಿಸಿ ನಂತರ 100 ರೂಪಾಯಿ ಟಿಕೆ
ಪಡೆದು ವೈಕುಂಠ ಕ್ಯೂಕಾಂಪ್ಲೆಕ್ಸ್ ಮೂಲಕ ಆಲ
ವನ್ನು ಪ್ರವೇಶಿಸಿದ ಶ್ರೀಯುತರು ಪ್ರಮಾಣ ವ
ಸ್ವೀಕರಿಸಿದ ನಂತರ ಪತ್ರಕರ್ತರೊಂದಿಗೆ ಮಾತ
ಡುತ್ತ ಚಿತ್ತೂರು ಜಿಲ್ಲೆಯ ಜಿಲ್ಲಾಧಿಕಾರಿಯಾ
ಕೆಲಸ ನಿರ್ವಹಿಸಿದ ತಮಗೆ ಈ ಯಾತ್ರಿಕ ಸೇವೆ
ಅವಕಾಶ ದೊರೆತಿರುವುದು ಸ್ವಾಮಿಯ ಸಂಕಲ್ಪ
ಆಗಿರಬೇಕೆಂದೂ, ತಿ ತಿ ದೇ ಉದ್ಯೋಗಿ
ನೆರವಿನಿಂದ ಯಾತ್ರಿಕರಿಗೆ ಮತ್ತೂ ಹೆಚ್ಚಿನ ಸೇ
ಮಾಡುವ ಆದರ್ಶ ಹೊಂದಿರುವುದಾಗಿಯೂ ತಿ
ಸಿದರು ವೈಕುಂಠಂ ಕ್ಯೂಕಾಂಪ್ಲೆಕ್ಸ್‌ನಲ್ಲಿ ನಡೆ
ಬರುವಾಗಲೇ ಸರತಿಯ ಸಾಲಿನಲ್ಲಿದ್ದ ಯಾ
ರನ್ನು ಮಾತನಾಡಿಸುತ್ತ, ಅವರ ಕುಂದು ಕೊ
ಗಳ ಬಗ್ಗ ಸೌಲಭ್ಯ ಸೌಕರ್ಯಗಳ ಬಗ್ಗೆ ವಿ
ರಿಸಿ ತಿಳಿದುಕೊಂಡರು ಸ್ವಾಮಿಯ ಸಂದರ್ಶನ
ನಂತರ ನೂತನ ಕಾರ್ಯನಿರ್ವಹಣಾಧಿಕಾರಿಗ
ಕುಟುಂಬ ಸಹಿತರಾಗಿ ತಿರುಚಾನೂರಿಗೆ ಬಂ
ಶ್ರೀ ಪದ್ಮಾವತೀ ದೇವಿಯನ್ನು ಸಂದರ್ಶಿಸಿ ಆರಾಧಿ
ದರು

## ನೂತನ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ

ತಿರುಮಲೆ ತಿರುಪತಿ ದೇವಸ್ಥಾನಗಳ ಹೊ
ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಯಾಗಿ ಐ
ಎಸ್ ಅಧಿಕಾರಿ ಶ್ರೀ ರಾಮಕೃಷ್ಣಯ್ಯನವರು ನಿ
ಮಿತರಾಗಿ, 98 ರ ಡಿಸೆಂಬರ್ 12 ರಂದು ಶನಿವಾ
ತಿ ತಿ ದೇವಸ್ಥಾನಗಳ ಸೇವೆಯಲ್ಲಿ ಪ್ರವೇಶಮಾ
ದ್ದಾರೆ ಈ ಮೊದಲು ಸಂಯುಕ್ತ ಕಾರ್ಯನಿರ್ವ
ಣಾಧಿಕಾರಿಯಾಗಿ ಹೆಚ್ಚಿನ ಕೆಲಸ ನೋಡುತ್ತಿದ್ದ ತಿ
ತಿ ದೇವಸ್ಥಾನಗಳ ಅರಣ್ಯಾದಿಕಾರಿ ಶ್ರೀ ವೆಂಕಟ್ರಾವ
ಯ್ಯನವರಿಂದ ಶ್ರೀಯುತರು ಪದವಿ ಬಾಧ್ಯತೆಯನ್ನ
ಸ್ವೀಕರಿಸಿದ್ದಾರೆ

# ಲಿಂಗೋಪಾಸನೆ

- ಅನಂತ ಚಿಂತಾಮಣಿ ಜ್ಯೋತಿಷೀ,

ಮಹೇಶ್ವರನು ಆಲಿಂಗನಾಗಿದ್ದು ಪ್ರಕೃತಿಯು ಪ್ರಧಾನ ಲಿಂಗವಾಗಿದೆ ಪ್ರಕೃತಿ ಅಥವಾ ಲಿಂಗದ ವಿಕಾಸ ಮತ್ತು ವಿಸ್ತಾರದಿಂದಲೇ ವಿಶ್ವದ ಸೃಷ್ಟಿಯಾಗಿದೆ ಅಖಿಲ ಬ್ರಹ್ಮಾಂಡವು ಲಿಂಗದ ಅನುರೂಪವೆಂದು ಭಾವಿಸಿದ್ದಾರೆ ಸೃಷ್ಟಿಯು ಲಿಂಗದ ಅಂತರ್ಗತವಾಗಿದ್ದು ಲಿಂಗಮಯವಾಗಿ ಕೊನೆಯಲ್ಲಿ ಲಿಂಗದಲ್ಲಿಯೇ ಇಡೀ ಸೃಷ್ಟಿ ಲಯವಾಗುವುದು

ಆಕಾಶಂ ಲಿಂಗಮಿತ್ಯಾಹುಃ
ಪೃಥವೀತಸ್ಯ ಪೀಠಿಕಾ
ಆಲಯಃ ಸರ್ವದೇವಾನಾಂ
ಲಯನ್ನಾಲ್ಲಿಂಗ ಮುಚ್ಯತೇ

ಎಂದು ಸ್ಕಾಂದಪುರಾಣದಲ್ಲಿ ಹೇಳಿದ್ದಾರೆ ಆಕಾಶವು ಲಿಂಗವಾಗಿದೆ ಪೃಥಿವಿಯು ಅದರ ಪೀಠಿಕೆಯಾಗಿದೆ ಎಲ್ಲ ದೇವತೆಗಳ ಆಲಯವಾಗಿದೆ ಇದರಲ್ಲಿ ಎಲ್ಲವರ ಲಯವಾಗುತ್ತದೆ ಹೀಗಾಗಿ ಇದನ್ನು ಲಿಂಗವೆನ್ನುತ್ತಾರೆ

ಚಿಹ್ನೆ ಅಥವಾ ಲಕ್ಷಣವು ಲಿಂಗ ಶಬ್ದದ ಸಾಧಾರಣವಾದ ಅರ್ಥ ವಾಸ್ತವದಲ್ಲಿ ಶಿವಲಿಂಗವು ಸಂಪೂರ್ಣ ವೇದಮಯ ಸಮಸ್ತದೇವಮಯವು ಸಮಸ್ತ ಭೂಧರ ಸಾಗರ ಗಗನ ಮಿಶ್ರಿತ ಸಂಪೂರ್ಣ ವಿಶ್ವ ಬ್ರಹ್ಮಾಂಡಮಯವೆಂದು ಮನ್ನಿಸಲಾಗಿದೆ ಶಿವಲಿಂಗವು ಶಿವ ಶಕ್ತಿಯಮಯವೂ ತ್ರಿಗುಣಮಯವೂ ಮತ್ತು ತ್ರಿದೇವಮಯವಾಗಿದೆ ಸೃಷ್ಟಿಯ ಆರಂಭದಿಂದಲೇ ಸಮಸ್ತದೇವರುಗಳು ಋಷಿ ಮುನಿ ಅಸುರ ಮನುಷ್ಯಾದಿ ವಿಭಿನ್ನ ಜ್ಯೋತಿರ್ಲಿಂಗ, ಸ್ವಯಂಭು ಲಿಂಗ, ಮಣಿಮಯ ರತ್ನಮಯ ಧಾತುಮಯ ಮೃಣ್ಮಯ ಮನೋಮಯ ಲಿಂಗಗಳ ಉಪಾಸನೆಯು ನಡೆದುಬಂದಿದೆ ಸ್ಕಂದಪುರಾಣಾನುಸಾರವಾಗಿ ಲಿಂಗೋಪಾಸನೆಯಿಂದ ಇಂದ್ರ, ವರುಣ ಕುಬೇರ ಸೂರ್ಯ ಚಂದ್ರ ಮೊದಲಾದವರಿಗೆ ಸ್ವರ್ಗಾಧಿಪತ್ಯ ರಾಜರಾಜಾಧಿಪತ್ಯ ದಿಕ್ಪಾಲಪದ ಲೋಕಪಾಲ ಪದ ಪ್ರಜಾಪತ್ಯ ಪದ ಹಾಗೂ ಪೃಥ್ವಿಯ ಮೇಲೆ ರಾಜರುಗಳ ಸಾರ್ವಭೌಮ ಚಕ್ರವರ್ತಿ ಸಾಮ್ರಾಜ್ಯದ ಪ್ರಾಪ್ತಿ ದೊರಕಿದೆ ಮಾರ್ಕಂಡೇಯ ರೋಮಶ ಮೊದಲಾದ ಮುನಿಗಳ ದೀರ್ಘಾಯುಷ್ಯದ ನೈರುತ್ಯ ಜ್ಞಾನ ವಿಜ್ಞಾನ ಮತ್ತು ಅಣಿಮಾದಿಕ ಅಷ್ಟ ಐಶ್ವರ್ಯಗಳ ಸಿದ್ಧಿಯ ಮೂಲಕಾರಣ ಕೂಡ ಯೋಗ ಯೋಗೇಶ್ವರ ಭಗವಾನ್ ಶಿವನ ಮೂಲ ಪ್ರತೀಕ ಲಿಂಗದ ವಿಧಿವತ್ ಪೂಜೆಯಿಂದ ಆಗಿದೆ ಭಾರತದಲ್ಲಿ ಪಾರ್ಥಿವ ಲಿಂಗ ಪೂಜೆಯ ಜೊತೆಗೆ ವಿಶೇಷ ಸ್ಥಾನಗಳಲ್ಲಿ ಪಾಷಾಣಮಯ ಶಿವಲಿಂಗಗಳು ಪ್ರತಿಷ್ಠಾಪಿತಗೊಂಡು ಪೂಜೆಯನ್ನು ಪಡೆದುಕೊಂಡಿವೆ ಬಾಣಲಿಂಗ, ಚಿನ್ನ ಬೆಳ್ಳಿಯ ಚಿಕ್ಕ ಲಿಂಗಗಳು, ಜಂಗಮಲಿಂಗಗಳು ಪೂಜೆಯನ್ನು ಪಡೆದುಕೊಂಡಿವೆ ಗರುಡಪುರಾಣದಲ್ಲಿ ವಿವಿಧ ಲಿಂಗಳ ವರ್ಣನೆಯಿಂದ ಸಂಕ್ಷೇಪವಾಗಿ ಇಂತಿದೆ



ಗಂಧಲಿಂಗವು ೨ ಭಾಗ ಕಸ್ತೂರಿ ೪ ಭಾಗ ಚಂದನ ಮತ್ತು ೩ ಭಾಗ ಕುಂಕುಮದಿಂದ ರಚಿಸುತ್ತಾರ ಶಿವ ಸಾಯುಜ್ಯಕ್ಕಾಗಿ ಇವರ ಪೂಜೆ ನಡಯುತ್ತವ

ಪುಷ್ಪ ಲಿಂಗವನ್ನು ನಾನಾ ಸಾರಮಯ ಹೂಗಳಿಂದ ರಚಿಸುತ್ತಾರ ಪೃಷ್ವಿಯ ಅದಿಪತ್ಯಲಾಭಕ್ಕಾಗಿ ಇದನ್ನು ಪೂಜಿಸುತ್ತಾರ

ಗೋಶ ಕೃಲ್ಲಿಂಗವನ್ನು ಸ್ವಚ್ಛ (ಕಪಿಲ) ಬಿಳುಪು ಕೆಂಪು ಮಿಶ್ರಿತ ಬಣ್ಣದ ಆಕಳಿನ ಸಗಣಿಯಿಂದ ರಚಿಸಿ ಪೂಜಿಸುವುದರಿಂದ ಐಶ್ವರ್ಯವು ಲಭಿಸುತ್ತದೆ ಅಶುದ್ಧ ಸ್ಥಾನದ ಮೇಲೆ ದೊರಕಿದ ಸಗಣಿಯು ವರ್ಜ್ಯವಾಗಿದೆ

ವಾಲಿಕಾಮಯ ಲಿಂಗ ಮಳಲಿನಿಂದ ಲಿಂಗ - ಮಾಡಿ ಪೂಜಿಸುವದರಿಂದ ವಿದ್ಯಾಧರತ್ವ ಮತ್ತು ಶಿವ ಸಾಯುಜ್ಯವು ಪ್ರಾಪ್ತವಾಗುತ್ತದೆ

ಯುವ ಗೋಧೂಮ ಶಾಲಿಜಾ ಲಿಂಗ - ಜವೆಗೋಧಿ, ಗೋಧಿ ಮತ್ತು ಅಕ್ಕಿಯ ಹಿಟ್ಟನ್ನು ಕೂಡಿಸಿ ರಚಿಸಿದ ಲಿಂಗದ ಪೂಜೆಯಿಂದ ಶ್ರೀ ಪುಷ್ಪ ಮತ್ತು ಪುತ್ರ ಲಾಭವಾಗುತ್ತದೆ

ಸಿತಾಖಂಡಮಯ ಲಿಂಗ ಪೂಜನದಿಂದ ಆರೋಗ್ಯ ಲಾಭವಾಗುತ್ತದೆ

ಲವಣಜ ಲಿಂಗದ ಪೂಜನದಿಂದ ಉತ್ತಮ ಪ್ರಕಾರದ ವಶೀಕರಣವಾಗುವುದು

ತಿಲಪಿಷ್ಟೋತ್ಥಲಿಂಗ - ಎಳ್ಳನ್ನು ಹಿಟ್ಟುಮಾಡಿ ಅದರ ಪುಡಿಯಿಂದ ಮಾಡಿದ ಲಿಂಗದ ಪೂಜೆಯು ಅಭಿಲಾಷೆಯನ್ನು ಪೂರ್ತಿಗೊಳಿಸುತ್ತದೆ

ಭಸ್ಮಮಯ ಲಿಂಗವು ಸರ್ವ ಫಲಪ್ರದವವೂ ಗುಡೋತ್ಥಲಿಂಗವು ಪ್ರೀತಿಯ ಹೆಚ್ಚಳವನ್ನು ಶರ್ಕರಾಮಯ ಲಿಂಗವು ಸುಖಪ್ರದವನ್ನುಂಟುಮಾಡುತ್ತದೆ

ವಂಶಾಂಕುರಮಯ ಲಿಂಗ ಬಿದಿರ ಮೊಳಕೆಯಿಂದ ಮಾಡಿದ ಲಿಂಗವು ವಂಶಾಂಕುರವಾಗಿದೆ

ಪಿಷ್ಟಮಯ ಲಿಂಗದ ಪೂಜೆಯು ವಿದ್ಯೆಯನ್ನು ದಧಿ ದುಗ್ಧೋದ್ಭವಲಿಂಗವು ಕೀರ್ತಿ ಲಕ್ಷ್ಮೀ ಸುಖವನ್ನು ಕೊಡುತ್ತದೆ

ಧ್ಯಾಜ ಲಿಂಗದ ಪೂಜೆಯು ಧಾನ್ಯವನ್ನು, ಫಲೋತ್ಥ ಲಿಂಗಪೂಜೆಯು ಫಲವನ್ನು, ಧಾತ್ರೀಫಲಜಾತ ಲಿಂಗದ ಪೂಜೆಯು ಮುಕ್ತಿಯನ್ನು, ನವನೀತಜ ಲಿಂಗದ ಪೂಜೆಯು ಕೀರ್ತಿ ಸೌಭಾಗ್ಯವನ್ನು ಕೊಡುತ್ತವ

ದೂರ್ವಾ ಕಾಂಡದ ಲಿಂಗ ಪೂಜನವು ಅಪಮೃತ್ಯು ನಾಶವನ್ನು, ಕರ್ಪೂರಜ ಲಿಂಗಪೂಜನವು

ಮುಕ್ತಿಯನ್ನು, ಆಯಸ್ಕಾಂತ ಮಣಿಜ ಲಿಂಗದ ಪೂಜೆನವು ಸಿದ್ಧಿಯನ್ನು ಮಾಂತ್ರಿಕ ಲಿಂಗಪೂಜೆಯು ಸೌಭಾಗ್ಯವನ್ನು, ಸ್ವರ್ಣನಿರ್ಮಿತ ಲಿಂಗಪೂಜೆಯು ಮಹಾಮುಕ್ತಿಯನ್ನು, ರಜತಲಿಂಗ ಪೂಜೆಯು ಭೂತಿ ವರ್ಧಿಕ ಮಾಡುತ್ತವೆ.

ಹಿತ್ತಾಳೆಯ ಮತ್ತು ಕಂಚಿನ ಲಿಂಗ ಪೂಜನವು ಮುಕ್ತಿಯನ್ನು, ತವರ ಕಬ್ಬಿಣ ಮತ್ತು ಸೀಸದ ಲಿಂಗ ಪೂಜನವು ಶತ್ರುನಾಶವನ್ನು ಮಾಡುತ್ತವೆ. ಅಷ್ಟ ಧಾತುಜ ಲಿಂಗ ಪೂಜೆಯು ಸರ್ವಸಿದ್ಧಿಯನ್ನು ಅಷ್ಟ ತಾಹ ಜಾತ ಲಿಂಗ ಪೂಜೆಯು ಕುಷ್ಟ ನಾಶ ವನ್ನು ವೈಡೂರ್ಯ ಲಿಂಗಪೂಜೆಯು ಶತ್ರುವರ್ಪ ನಾಶವನ್ನು ಮತ್ತು ಸ್ಪಟಿಕಲಿಂಗ ಪೂಜನವು ಸರ್ವ ಕಾಮವನ್ನು ಕೊಡುತ್ತವೆ. ಆದರೆ ತಾಮ್ರ ಸೀಸ ರಕ್ತ ಚಂದನ ಶಂಖ ಕಂಡು ಲೋಹ ಈ ದ್ರವ್ಯಗಳ ಲಿಂಗ ಗಳ ಪೂಜನವು ಕಲಿಯುಗದಲ್ಲಿ ವರ್ಜ್ಯವಾಗಿದೆ

ಲಿಂಗವನ್ನು ರಚಿಸಿ ಅದರ ಸಂಸ್ಕಾರವನ್ನು ಪಾರ್ಥಿವ ಲಿಂಗಗಳನ್ನು ಬಿಟ್ಟು ಉಳಿದ ಲಿಂಗಗ ಳಿಗೆ ಮಾಡಬೇಕಾಗುತ್ತದೆ ಬಂಗಾರದ ಪಾತ್ರೆಯಲ್ಲಿ ಹಾಲನ್ನು ಹಾಕಿ ಅದರೊಳಗೆ ಮೂರು ದಿನಗಳ ತನಕ ಇಟ್ಟು ತ್ರ್ಯಂಬಕ ಮಂತ್ರದಿಂದ ಸ್ನಾನ ಮಾಡಿ ವೇದಿಕೆಯ ಮೇಲೆ ಪಾರ್ವತಿಯನ್ನು ಷೋಡಶೋ ಪಚಾರಗಳಿಂದ ಪೂಜಿಸುವುದುಚಿತ ನಂತರ ಪಾತ್ರೆ ಯಿಂದ ಲಿಂಗ ತೆಗೆದು ಲಿಂಗವನ್ನು ಮೂರು ದಿನ ತನಕ ಗಂಗಾಜಲದಲ್ಲಿಡಬೇಕು ನಂತರ ಪ್ರಾಣ ಪ್ರತಿಷ್ಠೆ ಮಾಡಬೇಕು ಲಿಂಗವು ಸಾಧಾರಣವಾಗಿ ಅಂಗುಷ್ಠಪ್ರಮಾಣದ್ದಾಗಿರಬೇಕು ಪಾಷಾಣಾದಿ ಲಿಂಗಗಳು ಇವಕ್ಕಿಂತ ದೊಡ್ಡ ಆಕಾರದಲ್ಲಿ ರಚಿಸು ತ್ತಾರೆ ಯೋನಿ ಪೀಠ ಅಥವಾ ಮಸ್ತಕಾದಿ ಲಿಂಗದ ಹೊರತಾಗಿ ಲಿಂಗವನ್ನು ರಚಿಸುವುದು ಅಶುಭವಾ ಗಿದೆ ಲಿಂಗಪೂಜೆಯಲ್ಲಿ ಪಾರ್ವತಿ ಪರಮೇಶ್ವರ ಇಬ್ಬರ ಪೂಜೆಯಾಗಬೇಕು ಲಿಂಗದ ಮೂಲ ದಲ್ಲಿ ಬ್ರಹ್ಮ ಮಧ್ಯದಲ್ಲಿ ತ್ರೈಲೋಕ್ಯನಾಥ ವಿಷ್ಣು ಮತ್ತು ಮೇಲೆ ಪ್ರಣವಾಖ್ಯ ಮಹಾದೇವರು ಇರು ವರು ವೇದಿಕೆಯು ಮಹಾದೇವಿಯಾದರೆ ಲಿಂಗವು ಮಹಾದೇವ ಆಗಿರುವನು ಆದ್ದರಿಂದ ಒಂದು ಲಿಂಗದ ಪೂಜೆಯಲ್ಲಿ ಎಲ್ಲವರಿಗೆ ಪೂಜೆಯಾಗು ತ್ತದೆ ಬ್ರಾಹ್ಮಣರು ಬಿಳಿ, ಕ್ಷತ್ರಿಯ ಕೆಂಪು, ವೈಶ್ಯರು ಹಳದಿ ಶೂದ್ರರು ಕಪ್ಪು ಮಣ್ಣು ಕೊಳ್ಳಬೇಕು ಅನಿ ವಾರ್ಯ ಪ್ರಸಂಗದಲ್ಲಿ ಸಾಮಾನ್ಯ ಮೃತ್ತಿಕೆಯು ನಡೆ ಯುತ್ತವೆ

ನರ್ಮದಾ ನದಿವಡಗಳಲ್ಲಿ ಪಾಷಾಣ ಲಿಂಗವು ದೊರಕುತ್ತದೆ ನರ್ಮದೆಯ ಬಾಣ ಲಿಂಗವು ಮುಕ್ತಿ ಮುಕ್ತಿ ಪ್ರದಾಯಕವಾಗಿದೆ ಬಾಣ ಲಿಂಗದ ಪೂಜೆ ಯನ್ನು ಇಂದ್ರಾದಿ ದೇವರುಗಳು ಮಾಡಿರುವರು ಇದಕ್ಕೆ ವೇದಿಕೆ ಮಾಡಿ ಅದರ ಮೇಲೆ ಸ್ಥಾಪಿಸಿ ಪೂಜಿ ಸಬೇಕು ವೇದಿಕೆಯು ತಾಮ್ರ ಸ್ಪಟಿಕ ಬಂಗಾರ ಕಲ್ಲು ಬೆಳ್ಳಿಯದು ಆಗಬಹುದು

ಬಾಣಾಸುರನು ತಪಗೈದು ಮಹಾದೇವನಿಂದ ವರ ಪಡೆದನು ಬಾಣಾಸುರನ ಇಚ್ಛೆಯಂತೆ ಶಿವನು ಪರ್ವತದ ಮೇಲೆ ಸರ್ವದಾ ಲಿಂಗರೂಪ ದಲ್ಲಿ ಪ್ರಕಟವಾಗಿರುವುದು ಒಂದು ಬಾಣಲಿಂಗದ ಪೂಜೆಯಿಂದ ಅನೇಕ ಲಿಂಗಗಳ ಪೂಜೆ ಮಾಡಿದ ಫಲವು ಲಭಿಸುತ್ತದೆ

ಲಿಂಗಾರಾದನೆಯು ಕೇವಲ ಭಾರತದಲ್ಲಿ ಅಷ್ಟೇ ಮೀಸಲು ಎಂಬ ಭಾವನೆ ಶುದ್ಧ ತಪ್ಪು ಈ ಕೆಳ ಗಿನ ಸ್ಥಳಗಳಲ್ಲಿ ಲಿಂಗಪೂಜೆ ನಡೆಯುತ್ತದೆ ಎಂದು ಪಂ|| ಮಾಧವಾಚಾರ್ಯ ಶಾಸ್ತ್ರಿಗಳು ತಿಳಿಸಿರುತ್ತಾರೆ ಈಜಿಪ್ತದ ಮಿಸರ ದೇಶದಲ್ಲಿ ಅಸಿಸ್ ಮತ್ತು ಇಸಿಸ್ ಎಂಬಲ್ಲಿ ಲಿಂಗದ ಪೂಜೆ ನಡೆಯುತ್ತದೆ ಅಸಿ ರಸ್ ದ ತಲೆಯ ಮೇಲೆ ಕೊರಳಿನಲ್ಲಿ ಶಿವನಂತೆ ಸರ್ಪ ಕೈಯಲ್ಲಿ ತ್ರಿಶೂಲ, ಮೈಮೇಲೆ ವ್ಯಾಘ್ರ ಚರ್ಮ ವಿದೆ ಎಪಿಸ್ ಎಂಬ ನಂದಿ ಎತ್ತಿನ ಮೇಲೆ ಸವಾರಿ ಮಾಡುತ್ತಾನೆ ಬಿಲ್ವ ಪತ್ರದಂತಿರುವ ವೃಕ್ಷದ ಎಲೆ ಯನ್ನು ಪೂಜೆಯಲ್ಲಿ ಅರ್ಪಿಸಲಾಗುತ್ತದೆ ನಮಗೆ ಕಾಶಿಯಂತೆ ಅವರಿಗೆ ಮೆಂಫಿಸ್ ಯಾತ್ರೆಯು ಪ್ರಸಿ ದ್ಧವಾಗಿದೆ

ಉತ್ತರ ಆಫ್ರಿಕಾದ ಎಲ್ಲ ಜನಾಂಗಗಳಲ್ಲಿ ಲಿಂಗೋಪಾಸನೆ ನಡೆಯುತ್ತದೆ

ಗ್ರೀಸ್, ಯುನದಲ್ಲಿ ದೆಸಕ್ ಮತ್ತು ಪ್ರಿಯೆಸಿನ್ ಲಿಂಗದ ಪೂಜೆಯಿರುತ್ತದೆ.

ಸ್ಕಾಟಲೆಂಡಿನ ಗ್ಲಾಸಗೋ ನಗರದಲ್ಲಿ ಸುವರ್ಣ ಖಚಿತ ಬೃಹತ್ ಶಿವಲಿಂಗವಿದೆ.

ನಾರ್ವೆ ಮತ್ತು ಸ್ವೀಡನದಲ್ಲಿ ಲಿಂಗ ಪೂಜೆ ನಡೆ ಯುತ್ತದೆ.

ಆಸ್ಟ್ರಿಯಾ ಹಂಗೇರಿಯಲ್ಲಿ ತಂತ್ರಿಸ್ಪಕ ಎಂಬ ಲಿಂಗದ ಪೂಜೆ ನಡೆಯುತ್ತದೆ

ರೋಮ ಅಸಿರಿಯಾದ ಮಿಲನ್ ನಗರದಲ್ಲಿ ೩೦೦ ಘನ ಹಸ್ತ ಪ್ರಮಾಣದ ದೊಡ್ಡ ಶಿವಲಿಂಗವಿದ್ದು ಅದನ್ನು ಪೂಜಿಸುತ್ತಾರೆ

ಸಯಾ ದೇಶದಲ್ಲಿ ಎಕೋನಿಸ್ ಮತ್ತು ಎಸ್ಮರ ಗೈಟೀಸ್ ಎಂಬ ಪಾಷಾಣಮಯ ಶಿವಲಿಂಗ ಪೂಜಿ ಸುತ್ತಾರೆ.

ಜಾವಾ ಸುಮಾತ್ರಾದಲ್ಲಿ ಕೂಡ ಶಿವಲಿಂಗಪೂಜೆ ನಡೆಯುತ್ತದೆ

ಯಹೂದಿಯ ದೇಶದಲ್ಲಿ ಇಸರಲಾ ಇಲ್ಲಿ ಮತ್ತು ಯಹೂದಿ ಸಂಪ್ರದಾಯದ ಶಿವಲಿಂಗವು ಪ್ರಸಿದ್ಧವಾಗಿದ್ದು ಅದನ್ನು ಸ್ಪರ್ಶಿಸಿ ಪ್ರತಿಜ್ಞಾ ಸ್ವೀಕ ಸುವ ವಿಧಿಯಿದೆ

ಜಾಪಾನದ ಅಯಿಸ ನಗರದಲ್ಲಿ ಕೂಡ ಲಿಂಗ ಪೂಜೆ ನಡೆಯುತ್ತದೆ

ಸಿಲೋನ್, ಸೈಬೇರಿಯಾದ, ತಾಸಕಂದದ ಸ್ಕಿ ಯನ್ ಜನರು ಲಿಂಗಪೂಜೆ ಮಾಡುತ್ತಾರೆ.

ದಕ್ಷಿಣ ಅಮೇರಿಕಾದ ಬ್ರೆಜಿಲ್‌ದಲ್ಲಿ ಶಿವ ಗಣ ಪತಿ ಮೊದಲಾದ ಮೂರ್ತಿಗಳು ದೊರಕಿದ್ದು ಕ್ರಿಸ್ತ ಪೂರ್ವ ಸಹಸ್ರಾರು ವರ್ಷಗಳ ಮೊದಲಿನವು ಎನ್ನ ವಾಗಿದೆ ಆಗಲೇ ಮೂರ್ತಿಪೂಜೆ ವ್ಯಾಪಕವಾಗಿತ್ತು

ಇರಾಣದಲ್ಲಿ ಜ್ವಾಲಾಮಯ ಲಿಂಗದ ಪೂಜೆಯು ಮತ್ತು ಪೇರು ಸ್ಥಾನದಲ್ಲಿ ಮಣ್ಣಿನ ಲಿಂಗ ಪಾರ್ಥಿವೇಶ್ವರ ಪೂಜೆ ನಡೆಯುವುದು

ಅಮೇರಿಕಾದ ಪ್ರಂಬ್ರುದ ನಗರದಲ್ಲಿ ಗೋಲ ಸರಳ ದ್ವಿಮುಖೀ ಶಿವಲಿಂಗವಿದೆ

ಅಮೇರಿಕಾದ ಟೆನ್ನಿನಗರದಲ್ಲಿ ಬೃಹತ್ ಶಿವಲಿಂ ಗದ ಪೂಜೆಯು ನಡೆಯುತ್ತದೆ

ಸ್ವಾಮಿ ರಾಮತೀರ್ಥ ಮತ್ತು ಸ್ವಾಮಿ ವಿವೇಕಾ ನಂದರ ಪ್ರಚಾರದಿಂದ ಅಮೇರಿಕಾದಲ್ಲಿ ಅನೇಕ ಮಂದಿರಗಳು ಸಿದ್ಧಗೊಂಡವು.

ಕೆನ್ಯಾಯಾದ ನೈರೋಬಿಯಲ್ಲಿ ಗಗನ ಚುಂಬಿ ಶಿವ ಮಂದಿರಗಳು ಪ್ರತಿಷ್ಠಾಪಿತಗೊಂಡಿವೆ ದಕ್ಷಿಣ ಆಫ್ರಿಕಾ ಮಡಗಾಸ್ಕರ, ಫೀಜಿ ಮಾರಿಶಸ್ ಗಾಯನಾ ವೆಸ್ಟ ಇಂಡೀಸ್ ಮೊದಲಾದ ಸ್ಥಳಗಳಲ್ಲಿ ಶಿವಾಲಯಗಳು ಸಿದ್ಧಗೊಳ್ಳುತ್ತಿವೆ

ಇನ್ನೂ ಅನೇಕ ದೇಶದಲ್ಲಿ ಶಿವ ಪೂಜೆಯು ಈ ಹಿಂದೆ ನಡೆದಿತ್ತು ಈಗಲೂ ನಡೆಯುತ್ತದೆ ಕಾಶಿ ನಿವಾಸಿ ಬಾಬೂ ಶಿವಪ್ರಸಾದರು ವೃದ್ಧಿ ಪ್ರದಕ್ಷಿಣೆ ಎಂಬ ಸಚಿತ್ರ ಗ್ರಂಥದಲ್ಲಿ ಮತ್ತು ಸ್ವಕಾಲೂರಾಮ ಶಾಸ್ತ್ರಿಗಳು ಮೂರ್ತಿಪೂಜೆ ಎಂಬ ಗ್ರಂಥದಲ್ಲಿ ಭಾರ ತೇತರ ದೇಶದಲ್ಲಿ ಕೂಡ ಶಿವಪೂಜೆಯ ಬಗ್ಗೆ ವಿವ ರಿಸಿದ್ದಾರೆ

ಶಿವ ತತ್ವಜ್ಞಾನವು ಶಿವ ಭಕ್ತಿಯಿಂದಾಗುತ್ತದೆ ಭಗವಂತನಲ್ಲಿ ಪ್ರೀತಿ ಹೊಂದಿರುವುದರಿಂದ ಭಕ್ತಿಯು ಉಂಟಾಗುತ್ತದೆ ಪ್ರೀತಿಗುಣವು ರಹಸ್ಯಾ ದಿಯ ಶ್ರವಣದಿಂದಾಗುತ್ತದೆ ಸತ್ಸಂಗದಲ್ಲಿ ಶ್ರವ ಣವು ಲಭಿಸುತ್ತದೆ ಸದ್ಗುರುವೇ ಸತ್ಸಂಗದ ಮೂಲ ಇದಕ್ಕಾಗಿ ಸದ್ಗುರು ಮೂಲಕ ಶಿವ ತತ್ವಜ್ಞಾನ ದೊರ ಕಿಸುಕೊಡುವನು ಮಾನವನು ನಿಶ್ಚಯವಾಗಿ ಮುಕ್ತ ನಾಗುವನು ಬುದ್ಧಿವಂತ ಪುರುಷನಿಗೆ ಶಿವ ಭಕ್ತಿ ಮಾಡುತ್ತ ಸದಾ ಅವನ ಭಜನ ಮಾಡಿದರೆ ಶಿವನ ಪ್ರಾಪ್ತಿ ಲಭ್ಯ

# ಶಂಕರನಾಮಾವಳ್ಯಷ್ಟಕ

- ವಿ. ಗ. ವೇದೇಶ್ವರ.

**ತ್ರಿಷ್ಟುಪ್ ಛಂದಃ**

**ಇಂದ್ರವಜ್ರಾವೃತ್ತಮ್**

ಭೋಃ ನಾಥ, ಶಂಭೋ, ಕರುಣಾಕರೇಶ
ಪಾಪಪ್ರದೂರ, ಪ್ರಣವ, ಪ್ರತೇಜಃ
ಭೋಃ ಲೋಕಶಾಂತಿಪ್ರದ, ಶೂಲಧಾರಿನ್
ಪಾದಾರವಿಂದೇ ಧರ ವಿಶ್ವನಾಥ । ||೧||

ಹೇ ನಾಥ, ಶಂಭೋ, ಕರುಣಾಸಮುದ್ರನಾದ ಈಶನೇ, ಪಾಪನಾಶಕನೇ, ಪ್ರಣವನಾದ, ಮಹಾತೇಜೋನಿಧಿಯಾದ, ಪ್ರಪಂಚಕ್ಕೆ ಶಾಂತಿಯನ್ನು ದಯಪಾಲಿಸುವ, ತ್ರಿಶೂಲಧಾರಿಯಾದ ಹೇ ವಿಶ್ವನಾಥ, ನನ್ನನ್ನು ನಿನ್ನ ಪಾದಕಮಲದಲ್ಲಿ ಧರಿಸಿ, ಜನ್ಮವನ್ನು ಸಾರ್ಥಕಗೊಳಿಸು

ಕಾರುಣ್ಯಸಿಂಧೋ, ಗತಿಹೀನನಾಥ,
ರುದ್ರಾಕ್ಷಮಾಲಾಧರ, ಭಸ್ಮಧಾರಿನ್
ಭೋಃ ಲೋಕನಾಥ, ಪ್ರಣತಾರ್ತಿನಾಶ,
ಪಾದಾರವಿಂದೇ ಧರ, ವಿಶ್ವನಾಥ । ||೨||

ಕರುಣಾಸಮುದ್ರನಾದ, ಸರ್ವಗತಿ ಹೀನರಿಗೆ ನಾಥನಾಗಿರುವ, ರುದ್ರಾಕ್ಷಮಾಲಾಧರರಾದ, ಭಸ್ಮಧಾರಿಯಾದ, ಲೋಕಕ್ಕೇ ಸ್ವಾಮಿಯಾಗಿರುವ, ಭಕ್ತರ ದುಃಖವನ್ನು ಪರಿಹರಿಸುವ ಹೇ ವಿಶ್ವನಾಥ, ನೀನು ನಿನ್ನ ಪಾದಕಮಲವೆಂಬ ಅರಮನೆಯಲ್ಲಿ ಅನಾಥನಾಗಿರುವ ನನಗೆ ದಯಮಾಡಿ ಆಶ್ರಯವನ್ನು ಕರುಣಿಸು।

ಭೋಃ ರುದ್ರ, ದೈತ್ಯಾಂತಕ, ಸರ್ವಶಕ್ತ,
ಭೋಃ ಸರ್ಪ ಮಾಲಾಧರ, ಭಾಗ್ಯದಾತಃ
ಭೋಃ ಪಾರ್ವತೀನಾಥ, ಮನೋಹರೇಶ,
ಪಾದಾರವಿಂದೇ ಧರ ವಿಶ್ವನಾಥ। ||೩||

ದೈತ್ಯರ ನಾಶಕನಾದ, ಸರ್ವಶಕ್ತನಾದ ಹೇ ರುದ್ರದೇವ, ಭಾಗ್ಯಪ್ರದನಾದ, ಸರ್ಪಮಾಲೆಯನ್ನು ಧರಿಸುವ, ಪಾರ್ವತಿಯ ನಾಥನಾದ, ಮನೋಹರ,ಈಶನಾದ ಹೇ ವಿಶ್ವನಾಥ, ದಯಮಾಡಿ ನಿನ್ನ ಪಾದಕಮಲಗಳಲ್ಲಿ ನನಗೆ ಆಶ್ರಯವನ್ನು ನೀಡು

ಭೋಃ ಭಕ್ತದುಃಖ ಪ್ರಹರ, ಪ್ರಸಿದ್ಧ,
ಭಕ್ತಾರ್ಥ ಸಿದ್ಧಿಪ್ರಕರ, ಪ್ರಮೋದ
ಭೋಃ ಭಕ್ತಪಾಪೌಘಹರ, ಪ್ರವೀಣ
ಪಾದಾರವಿಂದೇ ಧರ ವಿಶ್ವನಾಥ । ||೪||

ಭಕ್ತರ ನಾನಾಪ್ರಕಾರದ ದುಃಖಗಳನ್ನು ದೂರಗೊಳಿಸುವ, ಸಿದ್ಧಪುರುಷನಾದ, ಭಕ್ತರ ಧರ್ಮ, ಅರ್ಥ, ಕಾಮ, ಮೋಕ್ಷ - ಪುರುಷಾರ್ಥಗಳನ್ನು ಸಿದ್ಧಿಮಾಡುವ, ಪ್ರಮೋದನನಾದ, ಭಕ್ತರ ಪಾಪವೆಂಬ ಪ್ರವಾಹವನ್ನು ನಾಶಗೊಳಿಸುವ, ಪ್ರವೀಣನಾದ ಹೇ ವಿಶ್ವನಾಥ, ನಿನ್ನ ಪಾದಕಮಲಗಳಲ್ಲಿ ನನಗೆ ಆಶ್ರಯವನ್ನು ಕರುಣಿಸು

ಸರ್ವೇಶ, ದೀನೇಶ, ಸುರಪ್ರಕಾಶ,
ಸರ್ವಜ್ಞ, ದಕ್ಷಾಧ್ವರನಾಶಕೇಶ
ಸಿದ್ಧೇಶ, ಸರ್ವಾಶ್ರಯದಾತೃಬಂಧೋ
ಪಾದಾರವಿಂದೇ ಧರ ವಿಶ್ವನಾಥ । ||೫||

ಸರ್ವರಿಗೂ ಈಶನಾಗಿರುವ, ದೀನರಿಗೆ ಆಶ್ರಯದಾತನಾದ, ಸುರಲೋಕದ ಪ್ರಕಾಶಕನಾದ, ಸರ್ವಜ್ಞನಾದ, ದಕ್ಷಪ್ರಜಾಪತಿಯ ಯಜ್ಞನಾಶಕನಾದ, ಸಿದ್ಧಿದಯಾಕರನಾದ ಸರ್ವರಿಗೂ ಆಶ್ರಯವನ್ನು ಕರುಣಿಸುವ ಬಂಧುವಾದ ಹೇ ವಿಶ್ವನಾಥ, ನಿನ್ನ ಪಾದಕಮಲಗಳಲ್ಲಿ ನನಗೆ ಆಶ್ರಯವನ್ನು ಕರುಣಿಸು

ಭೋಃ ಸಚ್ಚಿದಾನಂದ, ಮುದಪ್ರದಾತಃ,
ಭೋಃ ಶಾಂತಿದಾತಃ, ಭವರೋಗಹರ್ತಃ
ಭೋಃ ವಿಶ್ವಬಂಧೋ, ಗತಿಹೀನಧರ್ತಃ,
ಪಾದಾರವಿಂದೇ ಧರ ವಿಶ್ವನಾಥ । ||೬||

ಸಚ್ಚಿತ್ ಆನಂದವನ್ನು ಕರುಣಿಸುವ, ಸಂತೋಷವನ್ನು ನೀಡುವ, ಸಂಸಾರದಲ್ಲಿ ಶಾಂತಿಯನ್ನು ದಯಪಾಲಿಸುವ, ಜನ್ಮ- ಮೃತ್ಯು - ಈ ಭವರೋಗದಿಂದ ಮುಕ್ತಿಯನ್ನು ನೀಡುವ, ವಿಶ್ವದ ಏಕೈಕ ಬಂಧುವಾದ, ಗತಿಹೀನ ಭಕ್ತರಿಗೆ ಸದಾ ಆಶ್ರಯವನ್ನು ಕರುಣಿಸುವ ಹೇ ವಿಶ್ವನಾಥ, ನಿನ್ನ ಪಾದಕಮಲಗಳಲ್ಲಿ ನನಗೆ ಆಶ್ರಯವನ್ನು ನೀಡು।

ಮತ್ತಾಂಧನಾಶಿನ್, ಗಜಚರ್ಮಧಾರಿನ್
ದುರ್ಬುದ್ಧಿನಾಶಿನ್, ಭಯನಾಶಕಾರಿನ್
ದುರ್ಭಾಗ್ಯನಾಶಿನ್, ತ್ರಿಪುರಾಂತಕಾರಿನ್
ಪಾದಾರವಿಂದೇ ಧರ ವಿಶ್ವನಾಥ । ||೭||

ಮತ್ತಾಂಧರನ್ನು ನಾಶಗೊಳಿಸುವ, ಗಜಚರ್ಮವನ್ನು ಧರಿಸುವ, ದುರ್ಬುದ್ಧಿಯನ್ನು ದೂರಮಾಡುವ, ಭಯವನ್ನು ಪರಿಹರಿಸುವ, ದುರ್ಭಾಗ್ಯವನ್ನು ಶಾಂತಗೊಳಿಸುವ ತ್ರಿಪುರಾಂತಕನಾದ ಹೇ ವಿಶ್ವನಾಥ, ನಿನ್ನ ಪಾದಕಮಲಗಳಲ್ಲಿ ನನ್ನನ್ನು ಧರಿಸು।

ಭೋಃ ದೀನಧರ್ತಃ, ಕರುಣಾಲಯೇಶ,
ಭೋಃ ಪಂಚವಕ್ತ್ರ ಕ್ಷತದೂರಕೇಶ
ಭೋಃ ಶಂಕರ ಶ್ರೀ ಅರುಣಾಚಲೇಶ
ಪಾದಾರವಿಂದೇ ಧರ ವಿಶ್ವನಾಥ । ||೮||

ದೀನೋದ್ಧಾರಕನಾದ, ಕರುಣಾಲಯಕ್ಕಿರುವ ಏಕೈಕ ಅಧಿಪತಿಯಾಗಿರುವ, ಪಂಚವಕ್ತ್ರನಾದ, ಭಕ್ತರ ನೋವನ್ನು ಪರಿಹರಿಸುವ, ಭಕ್ತರಿಗೆ ಶಾಂತಿಪ್ರದ ಶಂಕರನಾದ, ಶ್ರೀ ಅರುಣಾಚಲೇಶ್ವರನಾದ ಹೇ ವಿಶ್ವನಾಥ, ನಿನ್ನ ಪಾದಕಮಲಗಳಲ್ಲಿ ನನಗೆ ದಯಮಾಡಿ ಸದಾ ಆಶ್ರಯವನ್ನು ಕರುಣಿಸು।

ಸ್ತೋತ್ರಂ ತ್ವಿದಂ ಯಃ ಪಠತಿ ಪ್ರನಿತ್ಯಂ
ಜ್ಞಾನಂ ಸುಬುದ್ಧಿಂ ಲಭತೇ ಸುಭಕ್ತಃ
ಸರ್ವಾರ್ಥ ಸಿದ್ಧಿಂ ಚ ಕರೋತಿ ಶಂಭುಃ
ಸೋಂತೇ ಸ್ವಪಾದೇ ಧರತಿ ತ್ರಿನೇತ್ರಃ ||೯||

ಈ ಸ್ತೋತ್ರವನ್ನು ಯಾವಾತನು ಪ್ರತಿದಿನ ಭಕ್ತಿಯಿಂದ ಪಠಿಸುತ್ತಾನೋ ಆ ಭಕ್ತ ಜ್ಞಾನ ಹಾಗೂ ಸದ್ಬುದ್ಧಿಯನ್ನು ಪಡೆಯುತ್ತಾನೆ. ಶ್ರೀ ಅರುಣಾಚಲೇಶ್ವರನು ಭಕ್ತನ ಬೇಡಿಕೆಗಳನ್ನು ಸಿದ್ಧಿಗೊಳಿಸುತ್ತಾನೆ ಅಲ್ಲದೆ, ತ್ರಿನೇತ್ರನು ಅಂತ್ಯದಲ್ಲಿ ಆ ಭಕ್ತನನ್ನು ತನ್ನ ಪಾದಕಮಲಗಳಲ್ಲಿ ಧರಿಸುತ್ತಾನೆ.

ಶ್ರುತ್ವಾದಿ ವಿದ್ಯಾಂ ಸುಮತಿಂ ದದಾತಿ
ಕಾರುಣ್ಯದೃಷ್ಟಿಂ ಪ್ರಣವಃ ದದಾತಿ
ಚಾಂಚಲ್ಯ ಚಿತ್ತಂ ಹರತಿ ಪ್ರಸನ್ನಃ
ಪಶ್ಚಾದ್ಧಿ ನಿತ್ಯಂ ವಸತಿ ಪ್ರಶಾಂತಃ ||೧೦||

ಈ ಸ್ತುತಿಯ ಶ್ರವಣಮಾತ್ರದಿಂದ ಶ್ರೀ ಅರುಣಾಚಲೇಶ ವಿದ್ಯೆ ಹಾಗೂ ಸನ್ಮತಿಯನ್ನು ದಯಪಾಲಿಸುತ್ತಾನೆ ಆ ಪ್ರಣವ.. ಶಂಕರ ಭಕ್ತನಮೇಲೆ ಸದಾ ತನ್ನ ಕರುಣಾದೃಷ್ಟಿಯನ್ನು ಬೀರುತ್ತಾನೆ ಪ್ರಸನ್ನನಾದ ಶ್ರೀ ಅರುಣಾಚಲೇಶ್ವರನು ಭಕ್ತನಲ್ಲಿರುವ ಚಂಚಲ ಚಿತ್ತವನ್ನು ದೂರಮಾಡಿ, ಪ್ರಶಾಂತನಾದ ಶಂಭುವು ಸದಾ ಸರ್ವತ್ರ ಭಕ್ತನ ಬೆಂಗಾವಲಾಗಿದ್ದು, ಎಲ್ಲೆಲ್ಲೂ ಕಾಪಾಡುತ್ತಾನೆ.

ಇಲ್ಲಿಗೆ ಶ್ರೀ ಶಂಕರನ ನಾಮಾವಳ್ಯಷ್ಟಕಸ್ತುತಿಯು ಮುಗಿದುದು.

* * *

# ಅರಿಕೆರೆಯ ಶಿವಲಿಂಗ

ಚಿತ್ರಲೇಖನ - **ಗುರುರಾಜ**





ಶ್ರೀನಿವಾಸಪುರ ತಾಲ್ಲೂಕಿನ ಅರಿಕೆರೆ ಗ್ರಾಮದಲ್ಲಿ ಸುಮಾರು ೨೫೦ ವರ್ಷಗಳ ಹಿಂದಿನದೆನ್ನಬಹುದಾದ ಮೂರು ಅಡಿ ಎತ್ತರವಿರುವ ಸುಂದರವಾದ ಬಿಳಿಕಲ್ಲಿನ ಪೀಠ ಹೊಂದಿರುವ ಆಕರ್ಷಕವಾದ ಶಿವಲಿಂಗವೊಂದು ಇತ್ತೀಚೆಗೆ ಪತ್ತೆಯಾಗಿದೆ

ಗ್ರಾಮದಿಂದ ಪೂರ್ವಕ್ಕೆ ಅರ್ಧ ಕಿಲೋಮೀಟರ್ ದೂರದಲ್ಲಿರುವ ಹಳೆಯ ಚೌಡೇಶ್ವರಿ ಕುಂಟೆಯಲ್ಲಿ ಈ ಶಿವಲಿಂಗ ದೊರೆತಿದೆ. ಈ ಲಿಂಗವು ಇಲ್ಲಿ ದೊರೆತಿರುವ ಬಗ್ಗೆ ಹಲವಾರು ದಂತಕತೆಗಳು ಚಾಲ್ತಿಯಲ್ಲಿವೆ ಈ ಹಳ್ಳಿಯಲ್ಲಿರುವ ಕೆಲವರ ಅಭಿಪ್ರಾಯದಂತೆ, ಅನೇಕ ವರ್ಷಗಳಿಂದ ತಮ್ಮ ತಾತಮುತ್ತಾತಂದಿರು ಈ ಕುಂಟೆಯಲ್ಲಿ ಶಿವಲಿಂಗ ಇರಬೇಕೆಂದು, ಆ ವಿಗ್ರಹವು ಗ್ರಾಮದಲ್ಲಿ ಈಗ ಶಿಥಿಲಗೊಂಡಿರುವ ದೇವಾಲಯದಿಂದ ಯಾರೋ ತೆಗೆದುಕೊಂಡು ಹೋಗುವಾಗ ರಾತ್ರಿಯ ಹೊತ್ತು ಕಣ್ಣು ಕಾಣಿಸದೆ ಆ ಲಿಂಗವನ್ನು ಕುಂಟೆಯಲ್ಲಿ ಎಸೆದು ಹೋಗಿರಬೇಕೆಂದು ಅಭಿಪ್ರಾಯಪಡುತ್ತಾರೆ

ಅಂದಿನಿಂದ ಈ ಲಿಂಗವನ್ನು ಮೇಲೆತ್ತುವ ಪ್ರಯತ್ನದಿಂದಾಗಿ ಊರಿನ ಜನ ಇದುವರೆಗೂ ಸಫಲರಾಗಲಿಲ್ಲ ಏಕೆಂದರೆ ಇದುವರೆಗೂ ಎಂತಹ ಬರಗಾಲ ಬಂದರೂ ಕುಂಟೆಯಲ್ಲಿನ ನೀರು ಬತ್ತಿಹೋಗಲಿಲ್ಲ ಆದುದರಿಂದ ಆ ಲಿಂಗವನ್ನು ತಾವೆಂದೂ ಕಂಡಿಲ್ಲವೆಂದು ಗ್ರಾಮದ ಹಿರಿಯರು ಹೇಳುತ್ತಾರೆ

ಇತ್ತೀಚೆಗೆ ಈ ಚೌಡೇಶ್ವರಿ ಕುಂಟೆಯಲ್ಲಿ ನೀರು ಕಡಿಮೆಯಾದಾಗ ಸದರಿ ಗ್ರಾಮದ ಕೆಲವು ಉತ್ಸಾಹಿ ತರುಣರು ಸ್ವಲ್ಪ ಸ್ವಲ್ಪ ನೀರನ್ನು ಹೊರಹಾಕಿದಾಗ ಹೂಳಲ್ಲಿ ಹೂತುಹೋಗಿದ್ದ ಶಿವಲಿಂಗವನ್ನು ಬಹಳ ಪ್ರಯಾಸಪಟ್ಟು ಹೊರತೆಗೆಯುವಲ್ಲಿ ಯಶಸ್ವಿಯಾಗಿದ್ದಾರೆ

ಇಲ್ಲಿಗೆ ಇಲ್ಲಿನ ಅನೇಕ ವರ್ಷಗಳ ಊಹಾಪೋಹಗಳಿಗೆ ಈಗ ತೆರೆಬಿದ್ದಂತಾಗಿದೆ

ಇಲ್ಲಿನ ಜನರು ಅತ್ಯಂತ ಸಂತಸ ಹಾಗೂ ಭಕ್ತಿಯಿಂದ ಇಲ್ಲಿಯೇ ತಾತ್ಕಾಲಿಕವಾಗಿ ಶಿವಲಿಂಗಕ್ಕೆ ಸಿಮೆಂಟ್ ತೊಟ್ಟಿ ಕಟ್ಟಿ ನೀರು ತುಂಬಿಸಿ ಪ್ರತಿನಿತ್ಯ ಪೂಜೆ ಸಲ್ಲಿಸುತ್ತಾ ಬಂದಿದ್ದಾರೆ

ಊರಿನ ಜನತೆಯ ಲೆಕ್ಕಾಚಾರದಂತೆ ಈ ಲಿಂಗವು ಇತ್ತೀಚಿನದಲ್ಲವೆಂದು ಈಗ ಅಭಿಪ್ರಾಯಪಡಲಾಗಿದೆ

# ಸೋದಾ ಹಾಗೂ ಮಂಜುಗುಣಿ

ಎಸ್. ಕೆ. ಆಚಾರ್

ತಪೋವಿದ್ಯಾವಿರಕ್ತ್ಯಾದಿ
ಸದ್ಗುಣೌಘಕರಾನನಂ
ವಾದಿರಾಜ ಗುರೂನ್ ವಂದೇ
ಹಯಗ್ರೀವ ದಯಾಶ್ರಯಾನ್

ಹಯಗ್ರೀವ ದೇವರ ಸಂಪೂರ್ಣ ಕೃಪೆಗೆ ಪಾತ್ರರಾದ ವಾದಿರಾಜರು ತಪಸ್ಸು, ವಿದ್ಯೆ ಮತ್ತು ವಿರಕ್ತಿ ಮುಂತಾದ ಸದ್ಗುಣಗಳ ಗನಿ ಆಗಿದ್ದಾರೆ, ಎಂದು ವಾದಿರಾಜ ಕವನದಲ್ಲಿ ವರ್ಣಿಸಲ್ಪಟ್ಟಿದೆ ಸಜ್ಜನರ ಉದ್ಧಾರಕ್ಕಾಗಿ ಜನ್ಮವೆತ್ತಿದ್ದ ಗುರುರಾಜರು, ತಿರುಮಲೇಶನಾದ ಶ್ರೀನಿವಾಸನ ಏಕಾಂತ ಭಕ್ತರಾಗಿದ್ದಾರೆ ತನ್ನ ಆರಾಧ್ಯ ದೈವ ಶ್ರೀಕೃಷ್ಣನಿಗೂ, ಜನ್ಮಭೂಮಿ ಭರತಖಂಡಕ್ಕೂ ಮಂಡಲಾಕಾರವಾಗಿ ಪ್ರದಕ್ಷಿಣೆಗೈದು, ಆಸೇತು ಹಿಮಾಚಲದವರೆಗೆ ಸಂಚರಿಸಿ, ದ್ವಾರಕಾ, ಬದರಿ, ಪುರಿ ಮತ್ತು ರಾಮೇಶ್ವರಗಳಂತಹಾ ಪಾವನ ಕ್ಷೇತ್ರಗಳನ್ನು ತುಂಗಾ, ಗಂಗಾದಿ ಪವಿತ್ರ ತೀರ್ಥಗಳ ಮಹಿಮೆಯನ್ನು ಶಾಸ್ತ್ರಸಿದ್ಧವಾಗಿ, ಸಜ್ಜನರ ಉಪಯೋಗಕ್ಕಾಗಿ, ತಮ್ಮ ತೀರ್ಥ ಪ್ರಬಂಧವೆಂಬ ಗ್ರಂಥದಲ್ಲಿ ವರ್ಣಿಸಿರುತ್ತಾರೆ ಯತಿರಾಜ ವಾದಿರಾಜರು ತಮ್ಮ ಸಂಚಾರ ಕ್ರಮದಲ್ಲಿ ವರ್ಣಿಸಿದ ಪಾವನ ಸೋದೆ ಹಾಗೂ ಮಂಜುಗುಣಿ ವೆಂಕಟೇಶ ಕ್ಷೇತ್ರಗಳ ಕಿರು ಪರಿಚಯ ನೀಡಲಾಗಿದೆ

**ಸೋದಾಕ್ಷೇತ್ರ :** ಹೂವಿನಕರೆ ವಾದಿರಾಜರ ಜನ್ಮಭೂಮಿ ಶ್ರೀಕೃಷ್ಣ ಕ್ಷೇತ್ರವಾದ ಉಡುಪಿ ವಾದಿರಾಜರ ಪ್ರಮುಖ ಕಾರ್ಯಕ್ಷೇತ್ರ ಅದೇ ರೀತಿ ಸೋದಾಕ್ಷೇತ್ರವು ವಾದಿರಾಜರ ನಿರ್ಯಾಣ ಕ್ಷೇತ್ರ ಇಲ್ಲಿ ಕೂಡಾ ವಾದಿರಾಜರು, ಸಶರೀರ ವೃಂದಾವನ ಪ್ರವೇಶ ಮಾಡುವ ಮೊದಲು, ಅನೇಕ ಮಹತ್ಕಾರ್ಯಗಳನ್ನು ಮಾಡಿರುತ್ತಾರ ಸೋದಾ ಕ್ಷೇತ್ರವು ಉತ್ತರ ಕನ್ನಡಜಿಲ್ಲಯ, ಶಿರ್ಸಿ ತಾಲೂಕಿನಲ್ಲಿದೆ ಸೋದಾಕ್ಷೇತ್ರವು ಶಿರಸಿಯಿಂದ ೧೯ ಕಿ.ಮಿ. ದೂರದಲ್ಲಿದ್ದು, ಬಸ್ ಅಥವಾ ಕಾರಿನ ಮೂಲಕ ತಲುಪಬಹುದಾಗಿದ ದಂಗಳೂರು ಪೂನಾ ರೈಲು ಮಾರ್ಗದಲ್ಲಿ ಹಾವೇರಿ ನಿಲ್ದಾಣದಲ್ಲಿ ಇಳಿದು ೫೬ ಕಿ.ಮಿ. ಬಸ್ಸಿನಲ್ಲಿ ಬಂದು, ಶಿರ್ಸಿ ತಲುಪಬಹುದು ಇಲ್ಲವೇ ಮುಂಬಯಿ - ಮಂಗಳೂರು ಬಸ್ ಮಾರ್ಗದಲ್ಲಿ ಶಿರ್ಸಿಯಲ್ಲಿ ಇಳಿದು, ಸೋದೆ ತಲುಪಬಹುದಾಗಿದೆ ಸೋದೆಯಲ್ಲಿ ಬಸ್ಸಿನಿಂದಿಳಿದು ಮುಂಬರುವಾಗ, ಮೊದಲು ವಾದಿರಾಜ ಪ್ರತಿಷ್ಠಿತ ರಮಾ ತ್ರಿವಿಕ್ರಮ ಆಲಯವೂ ಆ ಬಳಿಕ ದೇವಾಲಯದ ಕೆಳಭಾಗದಲ್ಲಿ ವಿಶಾಲವಾದ ಸೋದೆ ವಾದಿರಾಜಮಠವೂ ಆ ಬಳಿಕ ಮಠದಿಂದ ಸ್ವಲ್ಪ ಕೆಳಗೆ ಧವಳ ಗಂಗಾ ಎಂಬ ಪುಷ್ಕರಿಣಿಯ ಉತ್ತರ ಭಾಗದಲ್ಲಿ ವಾದಿರಾಜರ ಪಂಚ ವೃಂದಾವನವೂ ಕಂಡುಬರುತ್ತದೆ ವೃಂದಾವನದ ಪಕ್ಕದಲ್ಲಿ ಪೂರ್ವಭಾಗದಲ್ಲಿ ಭೂತರಾಜರ ಗುಡಿಯಿದೆ ಸೋದೆಯಿಂದ ೬ ಕಿ.ಮಿ. ದೂರದಲ್ಲಿ ವಾದಿರಾಜರು ತಪಸ್ಸು ಮಾಡುತ್ತಿದ್ದ ಸ್ಥಳ ತಪೋವನವಿದೆ ಸೋದೆಗೆ ಬಂದವರು ಈ ತಪೋವನವನ್ನು ಕೂಡಾ ಸಂದರ್ಶಿಸಿ ಬರುತ್ತಾರೆ ಇಲ್ಲಿ ಫಾಲ್ಗುಣ ಹುಣ್ಣಿಮೆಯಂದು ಅಂದರೆ ಹೋಳಿ ಹುಣ್ಣಿಮೆಯಂದು ತ್ರಿವಿಕ್ರಮ ದೇವರ ರಥೋತ್ಸವವು ನಡೆಯುತ್ತದೆ ರಥೋತ್ಸವದಿಂದ ೩ ನೇ ದಿನ ಅಂದರೆ ಫಾಲ್ಗುಣ ಬಹುಳ ತದಿಗೆಯಂದು, ಕ್ರಿಶ ೧೬೦೦ ರಲ್ಲಿ ವಾದಿರಾಜರು ಸಶರೀರ ವೃಂದಾವನ ಪ್ರವೇಶಿಸಿರುತ್ತಾರೆ ಇಲ್ಲಿ ನಡೆಯುವ ರಥೋತ್ಸವ ಹಾಗೂ ವಾದಿರಾಜರ ಆರಾಧನೆಗೆ ಸಾವಿರಾರು ಭಕ್ತರು ಸೇರುತ್ತಾರೆ

ಉತ್ಸವ ಮತ್ತು ಆರಾಧನೆ ಬಹಳ ವೈಭವದಿಂದ ನಡೆಯುತ್ತದೆ ಅಲ್ಲಿ ಸೇರಿದ ಭಕ್ತರಿಗೆ ಊಟ, ವಸತಿ, ವ್ಯವಸ್ಥೆ ಉಚಿತವಾಗಿ ಶ್ರೀ ಮಠದಿಂದಲೇ ನಡೆಯುತ್ತದೆ ವಾದಿರಾಜರು ೪ ಪರ್ಯಾಯ ಪೂಜೆಗಳನ್ನು ಉಡುಪಿಯಲ್ಲಿ ಶ್ರೀಕೃಷ್ಣನ ಸನ್ನಿಧಾನದಲ್ಲಿ ನಡೆಸಿ, ತಮ್ಮ ೫ ನೇ ಪರ್ಯಾಯವನ್ನು ಉಡುಪಿಯಲ್ಲಿ ತನ್ನ ಶಿಷ್ಯರಾದ ಶ್ರೀ ವೇದ ವೇದತೀರ್ಥರಿಂದ ನಡೆಸಿ ಅವರು ಸ್ವತಃ, ೫ನೇ ಪರ್ಯಾಯವನ್ನು ಸೋದೆಯಲ್ಲಿ ಮಾಡಿದರೆಂದು ವಾದಿರಾಜರ, ಜೀವನ ಚರಿತ್ರೆಯಿಂದ ತಿಳಿದು ಬರುತ್ತವೆ ಅವಕ್ಕಾಗಿ ಅವರು ಸೋದೆಯಲ್ಲಿ ಧವಳಾಗಂಗಾ ಸರೋವರದ ಸುತ್ತ ತಮ್ಮ ನಿತ್ಯಾರ್ಚನೆಗಾಗಿ ಆಂಜನೇಯ ಶ್ರೀ ಗೋಪಾಲಕೃಷ್ಣ ಮತ್ತು ಚಂದ್ರೇಶ್ವರ ದೇವಾಲಯಗಳನ್ನು ನಿರ್ಮಿಸಿದರು ಇಲ್ಲಿ ನಿತ್ಯಾರ್ಚನೆ ಇಂದಿಗೂ ನಡೆಯುತ್ತಿದೆ ವಾದಿರಾಜರು ಸ್ವರ್ಣರಥಾ ರೂಢವಾದ ತ್ರಿವಿಕ್ರಮ ದೇವರನ್ನು ತಮ್ಮ ಶಿಷ್ಯರಾದ ಭೂತರಾಜರಿಂದ, ಬದರಿಯಿಂದ ತರಿಸಿ ಸೋದೆಯಲ್ಲಿ ಪ್ರತಿಷ್ಠೆ ಮಾಡಿದರು ಬದರಿಯಿಂದ ಬರುವಾಗ ರಥದ ಚಕ್ರವೊಂದು ಬೀಳಲು ದೇವಾಲಯವು ಇಂದು ೩ ಚಕ್ರಗಳಲ್ಲಿ ನಿಂತಿರುವುದನ್ನು ನೋಡಬಹುದು ಕಲಿಯುಗದ ಪ್ರಯುಕ್ತ ಸ್ವರ್ಣದೇವಾಲಯವು ಶಿಲಾಮಯ ದೇವಾಲಯವಾಗಿ ೩ ಚಕ್ರದಲ್ಲಿ ನಿಂತಿರುತ್ತದೆ ಇಂತಹಾ ಪಾವನ ಸೋದಾ ಕ್ಷೇತ್ರಾಧಿಪತಿ



ಸೋದೆಯ ಶ್ರೀ ತ್ರಿವಿಕ್ರಮ ದೇವಾಲಯ

ಯಾದ, ತ್ರಿವಿಕ್ರಮ ಪ್ರಭುವನ್ನು ತಾವೇನೇ ಪ್ರತಿಷ್ಠಿಸಿ, ಅರ್ಚಿಸಿ, ಸೋದಾಕ್ಷೇತ್ರದಲ್ಲೇ ಸಶರೀರ ವೃಂದಾವನ ಪ್ರವೇಶಗೈದ ವಾದಿರಾಜರು, ಎರಡು ಶ್ಲೋಕಗಳ ಸೇವೆಯನ್ನು ಭಕ್ತಿಭರಿತರಾಗಿ ವರ್ಣಿಸಿದ್ದಾರೆ

ಬದರಿಯಲ್ಲಿ ಹರಿಯುತ್ತಿರುವ ಗಂಗೆಯು ಬದರಿಯಿಂದ, ತ್ರಿವಿಕ್ರಮದೇವರನ್ನು, ಭೂತ ರಾಜರ ಮೂಲಕ, ವಾದಿರಾಜರ ಅರ್ಚನೆಗೆ ಸೋದೆಗೆ ಕಳಿಸಿದ್ದು ಮಾತ್ರವಲ್ಲದೆ ಭೂದೇವಿ, ಶ್ರೀದೇವಿ ಹಾಗೂ ತನ್ನ ತಂದೆಯಾದ ಶ್ರೀಹರಿಗೆ ಹಾಗೂ ಅಣ್ಣನಾದ ಬ್ರಹ್ಮದೇವರಿಗೆ ಸಂತೋಷವನ್ನುಂಟುಮಾಡಲು, ತಾನು ಕೂಡಾ ಸೋದಾ ಕ್ಷೇತ್ರಕ್ಕೆ ಬಂದು, ಧವಲಗಂಗೆ ಸರೋವರದಲ್ಲಿ ಸನ್ನಿಹಿತಳಾಗಿಹಳು

ತ್ರಿವಿಕ್ರಮಂ ರಮ್ಯಗದಾರಿಶಂಖ
ಸರೋಜಮಾಲಾ ಧರಮಿಂದುವರ್ಣಂ
ಮನೋಹರಾಂಗಂ ಯತಿವಾದಿರಾಜ
ಪ್ರತಿಷ್ಠಿತಂ ನೌಮಿ ಸದಾ ಪ್ರಸನ್ನಂ

ತ್ರಿವಿಕ್ರಮರನ್ನು ಭೂತರಾಜರ ಮೂಲಕ ಬದರಿಯಿಂದ ತರಿಸಿ, ವಾದಿರಾಜರೇ ಸೋದೆಯಲ್ಲಿ ಪ್ರತಿಷ್ಠೆ ಗೈದರೆಂಬ ವಿಚಾರವನ್ನು ಈ ಹಿಂದೆ ತಿಳಿಸಿದ್ದೇವೆ. ಮನೋಹರವಾದ ಗದೆ, ಚಕ್ರ, ಶಂಖ, ಪದ್ಮ ಮತ್ತು ಅಕ್ಷಯ ಮಾಲೆಗಳನ್ನು ಕರದಲ್ಲಿ ಧರಿಸಿರುವ, ಚಂದ್ರವರ್ಣನಾದ, ಸುಂದರಾಂಗನಾದ ಭಕ್ತವತ್ಸಲನಾದ ವಾದಿರಾಜನೆಂಬ ಯತಿಯಿಂದ ಪ್ರತಿಷ್ಠಗೊಂಡ, ಸುಪ್ರಸನ್ನನಾದ ತ್ರಿವಿಕ್ರಮ ಸ್ವಾಮಿಯೇ ನಿನಗೆ ವಂದನಗಳು

ರಮಾ ತ್ರಿವಿಕ್ರಮದೇವರ ನೆಲೆವೀಡು, ಹಾಗೂ ಸಶರೀರ ವೃಂದಾವನ ಪ್ರವೇಶಗೈದ ಅಪರೋಕ್ಷ ಜ್ಞಾನಿಗಳಾದ, ಶ್ರೀ ವಾದಿರಾಜರ ಬೀಡು, ಪವಿತ್ರ ಪ್ರಶಾಂತ ನಿಸರ್ಗ ಸೌಂದರ್ಯದಿಂದೊಡಗೂಡಿದ, ಸೋದೆಯನ್ನು ಜೀವಿತ ಕಾಲದಲ್ಲಿ ಒಮ್ಮೆಯಾದರೂ ಸಂದರ್ಶಿಸಬೇಕು ಏಕೆಂದರೆ ಆಗ ಮನುಷ್ಯನ ದೇಹ ಮತ್ತು ಮನಸ್ಸುಗಳಿಗೆ, ಅಪಾರ ಶಾಂತಿ ದೊರಕುತ್ತದೆ ಇಂತಹದೇ ಪಾವನಾನುಭವ ವಾದಿರಾಜರ ಹುಟ್ಟೂರಾದ, ಹೂವಿನಕೆರೆಯನ್ನು ಸಂದರ್ಶಿಸಿದಾಗ ಕೂಡಾ ಆಗುತ್ತದೆ

**ಮಂಜುಗುಣಿ ವೆಂಕಟೇಶ :** ಸಪ್ತಗಿರಿಯಲ್ಲಿ ಸ್ವಯಂವ್ಯಕ್ತನಾದ, ತಿರುಮಲೇಶನು, ಬೇಟೆಯಾಡುತ್ತಾ, ಅನೇಕಾನೇಕ ದೇಶಗಳಲ್ಲಿ ಸಂಚರಿಸುತ್ತಾ ಬಂದು ಕೊನೆಗೆ, ಕರ್ನಾಟಕದ ಉತ್ತರ ಕನ್ನಡ, ಜಿಲ್ಲೆಯಲ್ಲಿ ಹರಿಯುವ ಸೋಮಾವಸಾಶಿನಿ ಎಂಬ ನದಿಯ ಪಶ್ಚಿಮ ತಟದಲ್ಲಿ ನಿದ್ರಿಸುವನು ಬಹುಕಾಲದ ನಂತರ ತಿರುಮಲೇನೆಂಬ ವಿಪ್ರನು ಸಂಚಾರ ಕ್ರಮದಲ್ಲಿ ಅಲ್ಲಿಗೆ ಬಂದು ನದಿಯ ಪರಿಶುದ್ಧ ಜಲವನ್ನು ಕಂಡು ಮೋಹಿತನಾಗಿ ಸಂಧ್ಯಾವಂದನಾದಿಗಳನ್ನು ಮಾಡುತ್ತಾ ಅಲ್ಲೇ ನೆಲಸುವನು ಈ ರೀತಿ ವಿಪ್ರನು ತನ್ನನ್ನು ಸತ್ಕರ್ಮಗಳಲ್ಲಿ ತೊಡಗಿಸಿಕೊಂಡು ಅಲ್ಲಿರಲು "ಇಲ್ಲಿಯೇ ಕೊಳದ ಪಕ್ಕದಲ್ಲಿ ವಿಶ್ರಾಂತನಾಗಿರುವ ವೆಂಕಟೇಶನನ್ನು ಇಲ್ಲಿಂದ ೧೦ ಕಿ ಮೀ ಉತ್ತರದಲ್ಲಿರುವ ಮಂಜುಗುಣಿ ಎಂಬ ಊರಿನಲ್ಲಿ ಶಿಲಾಮಯ ಆಲಯ ನಿರ್ಮಿಸಿ ವೈಷ್ಣವಾಗಮ ರೀತಿಯಿಂದ ಅರ್ಚಿಸು" ಎಂಬುದಾಗಿ ಅಶರೀರವಾಣಿಯಾಗುವುದು ಆ ಬಳಿಕ ತಿರುಮಲನು, ಊರಿನ ಬ್ರಾಹ್ಮಣರನ್ನೆಲ್ಲಾ ಕರೆದು ಮಂಜುಗುಣಿ ಗ್ರಾಮದಲ್ಲಿ ಶ್ರೀ ವೆಂಕಟೇಶನನ್ನು ಪ್ರತಿಷ್ಠಿಸಿ ಅರ್ಚಿಸುವನು ಶಿರ್ಶಿಯಿಂದ ಗೋಕರ್ಣಕ್ಕೆ ಹೋಗುವಾಗ ಮಂಜುಗುಣಿ ಗ್ರಾಮವು ಸಿಗುವುದು ಇಂತಹಾ ಮಹಾ ಮಹಿಮನಾದ, ಶ್ರೀ ವೆಂಕಟೇಶನನ್ನು ವಾದಿರಾಜರು, ಮಂಜುಗುಣ ವೆಂಕಟೇಶ ಮಹಾತ್ಮೆಯಲ್ಲಿ ವರ್ಣಿತವಾದ, ಪುರಾಣಸ್ಥವಾದ ಎರಡು ಶ್ಲೋಕಗಳಿಂದ ವರ್ಣಿಸುತ್ತಾರೆ

ಮನೋಹರಗಿರಿದ್ರೋಣೀವಾಸಂ
ಶ್ರೀಶಂ ಸತಾಂ ವಶಂ
ಧನುರ್ಬಾಣಧರಂ ಭಾಗ್ಯಕರಂ
ಪಾಪಹರಂ ಭಜೇ

ಮನೋಹರವಾದ ಮಂಜುಗುಣಿ ಗ್ರಾಮದಲ್ಲಿರುವ ಗಿರಿಯ ಗುಹೆಯಲ್ಲಿ ನಿಂದಿರುವ ಶಂಖ, ಚಕ್ರ, ದನುರ್ಬಾಣ ಧರನಾದ, ಭಕ್ತರಿಗೆ ಸಂಪತ್ಕರ ಪ್ರದನಾದ, ಪಾಪನಾಶಕನಾದ, ಸಜ್ಜನವತ್ಸಲನಾದ ಲಕ್ಷ್ಮೀಪತಿಯಾದ ಶ್ರೀ ವಂಕಟೇಶನನ್ನು ಸದಾ ಭಜಿಸಿರಿ

ಶ್ರೀ ವೆಂಕಟೇಶನು, ದುಷ್ಟರೆಂಬ ಮೃಗಗಳ ಬೇಟೆಗಾಗಿ, ಪಾದಗಳಲ್ಲಿ ಪಾದುಕೆಗಳನ್ನು ಧರಿಸಿ ಕರದಲ್ಲಿ ಬಿಲ್ಲುಬಾಣ, ಶಂಖ ಚಕ್ರಾದಿಗಳನ್ನು ಧರಿಸಿ, ಸಕಲ ಭೂಮಂಡಲದಲ್ಲಿ ಸಂಚಾರ ಗೈದು ಮಂಜುಗುಣಿ ಗ್ರಾಮದ ರಮ್ಯ ಸೌಂದರ್ಯವನ್ನು ಕಂಡು ಮುಂದಡಿಯಿಡಲಾರದೆ ಕಾಲುಗಳಲ್ಲಿ ಪಾದುಕೆಗಳಿದ್ದಂತೆಯೇ ಶಿಲಾಮಯ ಆಲಯದಲ್ಲಿ ಪ್ರಕೃತಿ ಸೌಂದರ್ಯವನ್ನು ಅಸ್ವಾದಿಸುತ್ತಾ ನಿಂತಿದ್ದಾನೆ ಅಂತಹ ಸ್ವಾಮಿಗೆ ಅನಂತ ನಮನಗಳು



# ತಿರುಪತಿ ತಿಮ್ಮಪ್ಪ - ವಾದಿರಾಜರು

ಜಿ. ಶ್ರೀಧರ್

ದಾಸ ಸಾಹಿತ್ಯದ ಬೇರುಗಳು ಭದ್ರವಾದ ನಂತರ, ಅದನ್ನು ವೃಕ್ಷೋಪಾದಿಯಲ್ಲಿ ಬೆಳಸಿದ ದಾಸವರೇಣ್ಯರಲ್ಲಿ ವಾದಿರಾಜರು ಪ್ರಮುಖರು ಈ ವೃಕ್ಷದಾಸ ಸಾಹಿತ್ಯದಿಂದ ಸಮಾಜವು ಸಾಕಷ್ಟು ಫಲ ಪಡೆದಿದೆ ಎಂಬುದಕ್ಕೆ ಇಂದಿಗೂ ಸಾಕಷ್ಟು ಉದಾಹರಣೆಗಳು ಇವೆ ಸಮಾಜದ ಮನೋಧರ್ಮ ಅರಿತವರಿಂದ ಈ ಕಾರ್ಯ ಬಾಹುಳ್ಯದ ಮುಖೇನ ದಾಸ ಸಾಹಿತ್ಯ ಜೀವಂತ ಮೆರೆದು ಶ್ರೀಮಂತವಾಗಿದೆ

ಮಧ್ವಾಚಾರ್ಯರಿಂದ ಸ್ಥಾಪಿತವಾದ ಅಷ್ಟಮಠಗಳಲ್ಲಿ ಸೋದೆ ಮಠವು ಒಂದಾಗಿದ್ದು, ಇದರ ಪೀಠಾಧಿಪತಿಯಾಗಿದ್ದ ವಾದಿರಾಜರು ದಾಸ ಸಾಹಿತ್ಯದ ನೈಜ ಜೀವನದ ಐತಿಹಾಸಿಕ ಘಟನೆಗಳನ್ನು ಸೃಜಿಸಿದರು ಕುಂದಾಪುರ ತಾಲ್ಲೂಕಿನ ಕುಂಭಾಸಿಯ ಹತ್ತಿರವಿರುವ ಹೂವಿನಕೆರೆಯೆಂಬ ಗ್ರಾಮದಲ್ಲಿ ವೈದಿಕ ಸಂಪ್ರದಾಯಸ್ಥ ರಾಮಾಚಾರ್ಯ - ಸರಸ್ವತಿದೇವಿ ದಂಪತಿಗಳ ಪುತ್ರರಾಗಿ ಜನಿಸಿದರು ವಾದಿರಾಜರು ಪೂರ್ವಾಶ್ರಮದಲ್ಲಿ ವಾದಿರಾಜರ ಹೆಸರು ವರಾಹ ಎಂದಾಗಿತ್ತು ಸೋದೆಮಠದ ವಾಗೀಶ ತೀರ್ಥರ ಅನುಗ್ರಹದಿಂದ ಕರುಣಿಸಿದ ವರಾಹನನ್ನು ಆತನ ಮಾತಾ-ಪಿತೃಗಳು ಎಂಟನೆಯ ವಯಸ್ಸಿನಲ್ಲಿ, ಮಠದ ಶ್ರೀಗಳವರಿಗೆ ಒಪ್ಪಿಸಿ ಶ್ರೀಗಳವರ ಅನುಗ್ರಹವನ್ನು ಮತ್ತೊಮ್ಮೆ ಕೋರಿದರು ಶ್ರೀಮಠಕ್ಕೆ ಬಂದ "ವರಾಹ" ವಾದಿತೀರ್ಥರೆಂಬ ಅಭಿದಾನದಿಂದ ಪ್ರಸಿದ್ಧರಾದರು

ವಾಗೀಶ ತೀರ್ಥರಲ್ಲಿ ವೇದಾಂತ ವಿದ್ಯಾಭ್ಯಾಸ ಪ್ರಾರಂಭಿಸಿದ ವಾದಿರಾಜರು, ತರುವಾಯ ತಮ್ಮ ಗುರುಗಳ ಇಷ್ಟದಂತೆ ವೈರಾಗ್ಯ ಅವಧೂತರಾಗಿದ್ದ ವಿದ್ಯಾನಿಧಿ ತೀರ್ಥರಲ್ಲಿ ಕ್ರಮಬದ್ಧ ವ್ಯಾಸಂಗ ಪ್ರಾರಂಭಿಸಿದರು

ಕೆಲಕಾಲ ವ್ಯಾಸರಾಜರ ಬಳಿಯೂ ಸಹ ವಾದಿರಾಜರು ವ್ಯಾಸಂಗ ಮಾಡಿರುವ ಐತಿಹ್ಯ ಸಹ



ಇದೆ ದಾಸ ಸಾಹಿತ್ಯದ ಆದ್ಯಪ್ರವರ್ತಕ ಶ್ರೀಪಾದರಾಜರ ಶಿಷ್ಯರಾದ ವ್ಯಾಸರಾಜರ ಶಿಷ್ಯರಾದ ವಾದಿರಾಜರು, ಪುರಂದರ - ಕನಕದಾಸರಂತಹ ಸಹಾಧ್ಯಾಯಿಗಳನ್ನು ಹೊಂದಿದ ಪೂರಕವೇ ದಾಸ ಸಾಹಿತ್ಯದ ಭಾಗ್ಯೋದಯ ಎಂದು ತಿಳಿಯಬಹುದು

ಗುರು ಪರಂಪರೆಯವರಾದ ಶ್ರೀಪಾದರಾಜರನ್ನು ಈ ರೀತಿ ಸ್ತುತಿಸಿ ಕೊಂಡಾಡಿದ್ದಾರೆ

ಶ್ರೀ ಪಾದರಾಯರ ದಿವ್ಯ ಶ್ರೀಪಾದವ ಭಜಿಸುವೆ
ವಾಗ್ವಜ್ರಗಳಿಂದ ಮಾಯಾವಾದಿಗಳೆಲ್ಲರ
ಬಾಯಬೀಗವಿಕ್ಕಿ ಮುದ್ರಿಸಿದ ಬಿಂಕಗಳ ಬಿಡಿಸುವ

ವ್ಯಾಸರಾಯರಿಗೆ ವಿದ್ಯಾಭ್ಯಾಸ ಮಾಡಿಸುವ
ಮಧ್ವಮತದಲ್ಲಿ ಪುಟ್ಟಿ ಮಾಯಾವಾದಿಗಳ ಕುಟ್ಟಿ
ಗೆದ್ದು ಮೆರೆದನು ದಿಟ್ಟ ಗುರುರಾಯ ಜಗಜಟ್ಟಿ

ಸುವರ್ಣವರ್ಣತೀರ್ಥರಸುತ
ಶ್ರೀಪಾದರಾಯರ
ಅವರ ನಾಮಗಳಿಂದ ಕಾವನಯ್ಯ ಕರುಣಾನಿಧಿ
ವರದ ವೆಂಕಟೇಶನ್ನ ಒಲಿದು ಪೂಜಿಸುವ
ಕರುಣದಿಂದ ಹಯವದನ ಸಲಹೋ ಯತಿರನ್ನನ

ಮಾತುಗಳೆಂಬ ವಜ್ರದಿಂದ ಮಾಯಾವಾದಿಗಳ ಬಾಯನ್ನು ವಾಗ್ವಜ್ರಗ್ರಂಥಕಾರರಾದ ಶ್ರೀಪಾದರಾಯರು ಮುಚ್ಚಿಸಿ, ಬೀಗ ಹಾಕಿದರು ವ್ಯಾಸರಾಯರಿಗೆ ವಿದ್ಯಾಭ್ಯಾಸ ಮಾಡಿಸಿದರು ಎಂದು ತಿಳಿಸುತ್ತಾ ಗುರುವರೇಣ್ಯರನ್ನು ಸ್ತುತಿಸಿದ್ದಾರೆ ಮಧ್ವಾಚಾರ್ಯರ ಅಷ್ಟಮಠಗಳಲ್ಲಿ ದಾಸಸಾಹಿತ್ಯದ ರಚನೆಗೆ ತೊಡಗಿಸಿದವರಲ್ಲಿ ಪ್ರಪ್ರಥಮರಾಗಿದ್ದಾರೆ

ವೇದಾಂತ ಪಾರಂಗತರು, ಬಾಲಯತಿಗಳು ಆಗಿದ್ದ ವಾದಿರಾಜರು ಭರತಖಂಡದ ತೀರ್ಥಕ್ಷೇತ್ರಗಳ ಯಾತ್ರೆ ಮಾಡಲು ನಿರ್ಧರಿಸಿರು ಮಾತೆಯ ಮುಂದೆ ಯತಿಗಳು ಕಿರಿಯರು ಎನ್ನುವ ದೃಷ್ಟಾಂತ ಶಂಕರಾಚಾರ್ಯರ ಬಾಲ್ಯದಲ್ಲಿ ಕಾಣುವಂತೆ ವಾದಿರಾಜರ ಜೀವನದಲ್ಲಿ ಸಾಮಿಪ್ಯ ದೃಷ್ಟಾಂತ ಈಕ್ಷಿಸಬಹುದು ತೀರ್ಥಕ್ಷೇತ್ರಗಳ ಸಂದರ್ಶನಕ್ಕೆ ಮುನ್ನ ತಾಯಿಯ ಆಶೀರ್ವಾದ ಪಡೆಯಲು ವಾದಿರಾಜರು, ಆಕೆಯಿದ್ದಲ್ಲಿ ಬಂದರು ಅವರ ತಾಯಿಯು ತನ್ನ ಯತಿ ಪುತ್ರನನ್ನು ಹರಿಸಿ, "ನನಗೆ ಪುತ್ರೋತ್ಸವವಾದರೆ ವೇದವ್ಯಾಸರಿಗೆ ಲಕ್ಷಾಭರಣ ಮಾಡಿಸುವುದಾಗಿ ಹರಕೆ ಹೊತ್ತಿದ್ದೆ ಆ ಕಾರ್ಯವನ್ನು ನೀನು ನೆರವೇರಿಸು" ಎಂದು ಅಣತಿಯನ್ನು ನೀಡಿದರು ವೇದವ್ಯಾಸರಿಂದ ರಚಿತವಾದ ಮಹಾಭಾರತದಲ್ಲಿನ ಲಕ್ಷ ಕ್ಲಿಷ್ಟ ಪದಗಳಿಗೆ, ವ್ಯಾಖ್ಯಾನ ಅರ್ಥದಿಂದ ಲಕ್ಷಾಲಂಕಾರ ಎಂಬ ಕೃತಿಯನ್ನು ರಚಿಸಿ ಬದರಿ ತೀರ್ಥಕ್ಷೇತ್ರದಲ್ಲಿ ವೇದವ್ಯಾಸರಿಗೆ ಸಮರ್ಪಿಸಿದರು ಮಾತೆಯ ಇಚ್ಛೆಯನ್ನು ತೀರಿಸಿ ಮಾತೃ ಋಣದಿದ ಮುಕ್ತತೆಗೆ ವಿಜೃಂಭಿಸಿದವರು - ವಾದಿರಾಜರು



ದಾಸಸಾಹಿತ್ಯದಲ್ಲಿ ತಿರುಪತಿ ತಿಮ್ಮಪ್ಪನಿಗೆ ಅಗ್ರ ಸ್ಥಾನ ತಿರುಪತಿ ವೆಂಕಟೇಶನನ್ನು ಕೊಂಡಾಡದ ದಾಸರು ಯಾರಿದ್ದಾರೆ? ಸಕಲ ದಾಸವರೇಣ್ಯರು, ಭೂವೈಕುಂಠವೇ ಎಂದು ಪ್ರಖ್ಯಾತಿ ಪಡೆದ ತಿರುಪತಿಯನ್ನು ಸಂದರ್ಶಿಸಿ ವೆಂಕಟೇಶ್ವರನನ್ನು ಭಜಿಸಿ ಪಾಡಿದ್ದಾರೆ ಅವರಲ್ಲೆ ವಾದಿರಾಜರೂ ಹೌದು ತಿರುಪತಿಯನ್ನು ಸಂದರ್ಶಿಸಿದ ವಾದಿರಾಜರಿಗೆ ಶೇಷಾಚಲಗಿರಿ "ಸಾಲಿಗ್ರಾಮ" ಮಯವಾಗಿ ಕಂಡಿತಂತೆ ಇಂತಹ ಸಾಲಿಗ್ರಾಮ ಗಿರಿಯನ್ನು ಪಾದಸ್ಪರ್ಶದಿಂದ ಏರುವುದು ಪಾಪಕರವೆಂದು ತಿಳಿದು, ಮೊಣಕಾಲೂರಿ ಬೆಟ್ಟವನ್ನು ಏರಿದರೆಂದು ಪ್ರತೀತಿ

ಬೆಟ್ಟವನ್ನು ಏರುವಾಗ ತಿರುಪತಿ ತಿಮ್ಮಪ್ಪ ಹಾಗೂ ತಮ್ಮ ಆರಾಧ್ಯದೈವದ ವರಾಹ ಬೇರೆ ಅಲ್ಲ ವೆಂಬುದನ್ನು ಖಚಿತ ಪಡಿಸುತ್ತಾ, ಕಾತುರದಿಂದ ಮನಸ್ಸು ದೇವರನ್ನು ಹೇಗೆ ಕಾಣಲು ಅನುವಾಗಿತ್ತು ಎಂದು ತಿಳಿಯಪಡಿಸುತ್ತಾರೆ

ಎಂದು ಕಾಂಬೆನು ಎನ್ನ ಸಲಹುವ
ಬಂಧು ಬಳಗ ನಮ್ಮಪ್ಪನ ತಿರುಪತಿಲಿಪ್ಪನ
ವರಾಹ ತಿಮ್ಮಪ್ಪನ
ದಂಡಿಗೆಯ ಬಾರಿಸುತ ಶ್ರುತಿಗೂಡಿ
ಕೊಂಡು ಪಾಡುತ ಮನದಿ ಲೋಲ್ಯಾಡುತ
ಕುಣಿಕುಣಿದಾಡುತ
ಬೆಟ್ಟದೊಡೆಯನ ಚರಣಕಮಲಕೆ ಶಿರ-
ವಿಟ್ಟು ಕರಗಳ ಮುಗಿವೆ ನಾ ಕವಕವ ನಗುವೆ
ಎನ್ನೊಡೆಯನ ಪೊಗಳೆ ನಾ

ಸ್ವಾಮಿ ಪುಷ್ಕರಿಣಿಯಂ ಸ್ನಾನ ನೇಮವ
ಮಾಡುವೆ ಪುಣ್ಯಕ್ಷೇತ್ರವ ನೋಡುವೆ
ಹಯವದನನ ಕೊಂಡಾಡುವೆ

ತಿರುಪತಿಯ ಶೇಷಾಚಲದ ಎದುರು ನಿಂತು ಆ ಮೂರ್ತಿಯನ್ನು ನೋಡುತ್ತಲೆ ತನ್ಮಯರಾದ ವಾದಿರಾಜರು ಈ ರೀತಿ ಬಣ್ಣಿಸಿದ್ದಾರೆ

ಸಾರಿದೆನೊ ನಿನ್ನ ವೆಂಕಟ ರನ್ನ
ನೀರಜ ನಯನನೆ ನಿರ್ಮಲ ಗುಣಪೂರ್ಣ
ಅನಾಥನು ನಾನು ಎನಗೆ ಬಂಧು ನೀನು
ನಿನ್ನವನೆಂದುನೋಡೋನೀನಾಗಿದಯ
ಮಾಡೊ

ಎನ್ನ ಕುಂದುಗಳನು ಎಣಿಸಲಾಗದೊ ದೇವ
ಪನ್ನಗಾದ್ರಿವಾಸ ನೀನೆ ನಿರ್ದೋಷ
ದೇಶದೇಶದವರ ಪೊರೆವಂತೆ ಪೊರೆಯೆನ್ನ
ಶೇಷಾಚಲ ಘನ ಶ್ರೀಶ ಹಯವದನ

ವೆಂಕಟೇಶ್ವರನ ಮನೋಹರ ಮೂರ್ತಿಯ ದೃಶ್ಯ ವಾದಿರಾಜರಲ್ಲಿ ಅಚ್ಚಳಿಯದೆ ಉಳಿಯಿತು ಸ್ವಾಮಿಯ ದರ್ಶನವನ್ನು ವರ್ಣಿಸುತ ಆನಂದಭರಿತರಾದರು.

ಅರಳಿದ ಕೆಂದಾವರೆಯ ಇರವ ಧಿಕ್ಕರಿಸುವ
ಗಿರಿಯ ತಿಮ್ಮರಾಯನ ಚರಣಗಳ ಕಂಡೆ ನಾ
ಅರುಣತಳದಲಿಪ್ಪ ಅಂಕುಶ ಧ್ವಜವಜ್ರಾದಿ
ಸುರುಚಿರ ರೇಖೆಗಳ ಸೊಬಗ ಕಂಡೆ ನಾ
ಬೆರಳಸಾಲ್ಗಳಮೇಲೆ ಬೇರೆಬೇರೆ ತೋರುವ ಭಾ
ಸುರ ಸನಮಣಿಗಳ ಕಿರಣಗಳ ಕಂಡೆ ನಾ

ವೆಂಕಟೇಶನ ದರ್ಶನವಾದ ದಿನವೇ ಸುದಿನ ಹಾಗೂ ತನ್ನ ಪೂರ್ವ ಪಾಪಕರ್ಮ ದೆಂದು ಹೋಗಿ ಮೋಕ್ಷಪ್ರದಾನವಾಯಿತು ಎಂದು ಹಿರಿಹಿಗ್ಗುವರು

ಇಂದಿನದಿನ ಸುದಿನ ಗೋವಿಂದನಕಂಡಕಾರಣ
ಹಿಂದಿನ ಪಾಪ ವೃಂದವು ದಂಡು
ಹೋಯಿತು ಎನಗೆ
ಮುಂದಿನ ಮುಕುತಿ ದೊರಕಿತು
ತಂದೆ ಹಯವದನ ನೊಲವಿಂದ

ಸಾಕ್ಷಾತ್ ವೆಂಕಟೇಶನ ದರ್ಶನಕ್ಕಿಂತ ಜೀವನದಲ್ಲಿ ಇನ್ನೇನು ಸೌಭಾಗ್ಯ ಬೇಕು? ಎಂದು ವಾದಿರಾಜರು ಪ್ರಶ್ನಿಸುತ್ತಾ ಸಮಕಾಲೀನ ಉಪಮೆಯನ್ನು ಕೀರ್ತನೆಯಲ್ಲಿ ನೀಡಿದ್ದಾರೆ

ಡಿಳ್ಳಿಯರಾಯನಕಂಡು ಪುಲ್ಲಿಗೆಯಬೇಡುವರೆ
ತಲೆಯೂರಿ ತಪಸು ಇದ್ದಲ್ಲಿ ಸಾಧಿಸಿಕೊಳ್ಳಿರೊ
ಕ್ಷುಲ್ಲಕರೆಂಜಲನುಂಡುಬಾಳ್ವರನೋಡುಲ
ಕ್ಷುಮಿ
ವಲ್ಲಭನಲ್ಲದೆ ಹೀನ ಫಲದಾಸೆ ಸಲ್ಲದಯ್ಯ
ಚೆಲ್ವ ಹಯವದನ ತಿಮ್ಮನಲ್ಲದೆ ಕೈವಲ್ಯಕ್ಕೆ
ಹಲ್ಲು ಹಂಚಿಗೆ ಬಾಯಿತೆರೆದಂತೆ
ಅಲ್ಲಲ್ಲಿಗೆ ಪೋಗದಿರಿ

ಸಾಕಾತ್ ಹರಿಯ ದರ್ಶನವನ್ನು ಆಶಿಸುವುದು ಬಿಟ್ಟು ಹೀನ ಫಲಗಳನ್ನು ನಿರೀಕ್ಷಿಸುವುದು, ದೆಹಲಿಯ ದೊರೆಯನ್ನು ಕಂಡು ಸಾಮ್ರಾಜ್ಯದ ಭೋಗ ಭಾಗ್ಯಗಳನ್ನು ಬೇಡದೆ, ಕೇವಲ ಒಂದು ಜೋಳಿಗೆಯನ್ನು ಬೇಡಿದಂತೆ ಎಂದು ಉಪಮೆ ನೀಡಿ, ಸ್ತುತಿಸಿದ್ದಾರೆ

ತಿರುಪತಿ ತಿಮ್ಮಪ್ಪನನ್ನು ಬಡ್ಡಿ ವಸೂಲಿ ಮಾಡುವ ದೇವರೆಂದು ಸಹ ವಾದಿರಾಜರು ಛೇಡಿಸುತ್ತಾರೆ

ಶ್ರೀಶ ನೀನಹುದೋ ಶೇಷಾಚಲವಾಸ
ನೀನಹುದೋ
ಶೇಷಶಯನ ಸುರೇಶ ವಂದಿತ
ಶೇಷಜನರನು ಪಾಲಿಸಿ ಬಡ್ಡಿ-
ಕಾಸು ಸೇರಿಸಿ ಗಂಟು ಕಟ್ಟುವ
ಕ್ಯಾಸಕ್ಕಿ ತಿಮ್ಮಪ್ಪ ನೀನೆ

ವೆಂಕಟೇಶನ ಎದುರು ಇನ್ಯಾವ ದೈವವಿದೆ ಎಂದು ಸಾರಿ ಹೇಳಿ, ಬಿನ್ನಹ ಅಲಿಸುವಂತೆ ಬೇಡುತ್ತಾರೆ

ಧನ್ಯ ನೀನಹುದೊ ಸುರಮುನಿ
ಮಾನ್ಯ ನೀನಹುದೊ
ಪನ್ನಗಾರಿವಾಹನ್ನ ಧರೆಯೊಳು
ಇನ್ನೂ ನಿನಗೆದುರ್ಯಾರ ಕಾಣೆನೊ ಪ್ರ-
ಸನ್ನನಾಗೆಲೊ ಭಿನ್ನಹ ಕೇಳು ಪ್ರಸನ್ನ
ವತ್ಸಲ ಶ್ರೀ ಹಯವದನ

ಕ್ಷುಲ್ಲಕವಾದ ಭ್ರಮೆಗಳನ್ನು ತ್ಯಜಿಸಿ ತಿರುಪತಿ ಯಾತ್ರೆಯಿಂದ ಇಷ್ಟದ ಫಲಗಳನ್ನು ಪಡೆಯುವಂತೆ ಕರೆನೀಡಿದ್ದಾರೆ

ಗಾತ್ರವ ಬಳಲಿಸಿ ಸ್ತೋತ್ರವ ಪಾಡುತ
ಯಾತ್ರೆಯ ಮಾಡಿ ವೆಂಕಟೇಶನ ಮೂರ್ತಿಯ
ನೇತ್ರದಿ ನೋಡಿ ತಮಿಷ್ಟವ ಪಡೆವಸ-
ದ್ಭಕ್ತರ ಕಂಡು ನಿನ್ನ ಮನದ ಭ್ರಮೆಯಬಿಡು
ದೈತ್ಯ ಪೌಂಡ್ರಕನ ಮತವ ನೆಚ್ಚಿ ಕೆಡದೇಡ
ಚಿತ್ರ ಚರಿತ್ರ ಹಯವದನ ನೊಲಿಸಿಕೊ

ಹಾಗೆಯೇ ಮುಂದುವರಿದ ವಾದಿರಾಜರು, ಶ್ರೀನಿವಾಸನ ದಾಸರ ದಾಸನೆನಿಸಿಕೊಳ್ಳಲು ಹೆಮ್ಮೆಪಟ್ಟಿದ್ದಾರೆ

ಶ್ರೀನಾಥ ಪ್ರಭುವೆತ್ತ ಹೀನಯೋನಿಗಳೊಳು
ನಾನು ದುಃಖಗಳೆಂಬ ಹೀನಮಾನವನೆತ್ತ
ಭಾನು ಮಂಡಲವೆತ್ತ ಶ್ವಾನ ಸುಬ್ಬರ ವೆತ್ತ
ಮಾನವ ಹರಿನಾನೆಂಬುದ ನೆನೆಯದಿರು
ದಾನವ ಕುಲ ವೈರಿ ಹಯವದನ ವೆಂಕಟ
ಶ್ರೀವಿವಾಸನ ದಾಸರ ದಾಸನೆನಿಸಿಕೊ

ಶ್ರೀನಿವಾಸ
ದೇವರ ಸದಾಕಾಲದ ಸ್ಮರಣೆ ಸಂಸಾರ ಭಯದಿಂದ ನಿವಾರಣೆ ಮಾಡುತ್ತದೆ ಎಂದು ವಾದಿರಾಜರು ಅಚಲವಾದ ಅಭಯವನ್ನು ಹೇಳುತ್ತಾ 'ತಿರುಮಲೆರಾಯ ತ್ರಿವಿಕ್ರಮ ಮಾರುತಿ, ಸಿರಿ ಹಯವದನನ ಚರಣವೆ ಗತಿಯೆನ್ನು' ಎಂದು ಸಾರಿದ್ದಾರೆ

* * *

# ಅನ್ನಮಯ್ಯ-ಅಧ್ಯಾತ್ಮ

- ಕಂದಾಡೈ ಕೇಶವನ್

ತಾಳ್ಳಪಾಕ ಅನ್ನಮಾಚಾರ್ಯ ತೆಲುಗು ಸಾಹಿತ್ಯದ ಆಧ್ಯಾತ್ಮಿಕ ಅಭಿರುಚಿವುಳ್ಳ ಶ್ರೇಷ್ಠ ಕವಿಪುಂಗವ ಹಾಗೂ ವಾಗ್ಗೇಯಕಾರ ಕನ್ನಡ ನಾಡಿನಲ್ಲಿ ಬಾಳಿದ ಭಾಗವತ ಶಿರೋಮಣಿ ಪುರಂದರದಾಸರು ಅನ್ನಮಾಚಾರ್ಯರಿಗೆ ಕಿರಿಯ ಸಮಕಾಲೀನರು ಅನ್ನಮಾಚಾರ್ಯರು ಕ್ರಿ. ಶ. ೧೫ ನೆಯ ಶತಮಾನದಲ್ಲಿ ತಮ್ಮ ಸಂಕೀರ್ತನೆಗಳಿಂದ ತಿರುಪತಿ ವೆಂಕಟೇಶ್ವರನನ್ನು ಕುರಿತು ಹಾಡಿದರೆ ಪುರಂದರದಾಸರು ೧೬ ನೆಯ ಶತಮಾನದ ಪೂರ್ವದಲ್ಲಿ ತಮ್ಮ ಕೀರ್ತನೆಗಳಿಂದ ಹರಿಭಕ್ತಿಯನ್ನು ಹರಡಿದರು ಸುಮಾರು ಮೂವತ್ತು ಸಾವಿರ ಕೀರ್ತನೆಗಳನ್ನು ರಚಿಸಿ ತೆಲುಗು ಸಾಹಿತ್ಯಕ್ಕೆ ಅಪಾರ ಸೇವೆಸಲ್ಲಿಸಿದ ಈ ಭಾಗವತ ಶಿರೋಮಣಿಯ ಕವಿತಾಶಕ್ತಿ, ಸಂಗೀತ ಪರಿಶ್ರಮ, ಗಾನ ಮಾಧುರ್ಯದ ಕೌಶಲ ಆತನ ಆಧ್ಯಾತ್ಮಿಕ ಜೀವನದ ಮೇಲೆ ಪ್ರಭಾವಬೀರಿ ಆತನ ಶ್ರೀವೈಷ್ಣವ ನಿಷ್ಠೆಗೆ ಪೂರಕಗಳಾಗಿ ಸಾಧಕಗಳಾದವು. ಪೂರ್ವಾಚಾರ್ಯರಿಂದ ಅನುಷ್ಠಿಸಲ್ಪಟ್ಟ ಅನಂತವಾದ ಚ್ಯುತಿಯಿಲ್ಲದ ಅತುಲಿತವಾದ ಆನಂದಪ್ರದವಾದ ವೆಂಕಟೇಶ್ವರನಲ್ಲಿ ಭಕ್ತಿ, ಅದೇ ಜೀವನಕ್ಕೆ ವಿಮುಕ್ತಿ ಜೀವಿತಾನುರಕ್ತಿ ಮತ್ತು ಮಹೋಜ್ವಲ ದೀಪ್ತಿ ಶ್ರೀರಾಮಾನುಜರ ಪರಮಭಕ್ತಿ ಶರಣಾಗತಿ ತತ್ವವನ್ನು ಅರಿತು ಹಾಡಿ ಪಾಮರರನ್ನು ರಂಜಿಸಿದ ಈ ಅನ್ನಮಯ್ಯನ ಪದಕವಿತಾಚಾತುರ್ಯ ಅಮೋಘ, ಅದ್ಭುತ ಆಧ್ಯಾತ್ಮತತ್ವ ನಿರೂಪಣೆ ಅಸಾಧಾರಣವಾದುದು

## ಜೀವನ

ಅನ್ನಮಾಚಾರ್ಯರು ಕ್ರಿಶ ೧೫ ನೇ ಶತಮಾನ ಅಂದರೆ ಶಾಲಿವಾಹನ ಶಕವರ್ಷ ೧೩೪೬ ಆದ ಕ್ರೋಧಿ ನಾಮ ಸಂವತ್ಸರದಲ್ಲಿ "ತಾಳ್ಳಪಾಕ" ಎಂಬುವ ಗ್ರಾಮದಲ್ಲಿ ಹುಟ್ಟಿದರು ಇವರ ಮೊಮ್ಮಗ ತಿರುವೆಂಗಳನಾಥ ಅಥವಾ ಚಿನ್ನನ್ನ ಎಂಬುವ ಕವಿಯಿಂದ ತನ್ನ ತಾತನ ಜೀವನ ಚರಿತೆಯನ್ನು "ಅನ್ನಮಾಚಾರ್ಯ ಚರಿತಮು" ಎಂಬುವ ಪದ್ಯಕಾವ್ಯದಲ್ಲಿ ರಚಿತವಾಗಿದೆ ಅವರ ಪ್ರಕಾರ ಅನ್ನಮಾಚಾರ್ಯರ ತಂದೆ ನಾರಾಯಣಸೂರಿ ತಾಯಿ ಲಕ್ಕಮಾಂಬ ನಂದವರೀಕ ಬ್ರಾಹ್ಮಣವಂಶ ಭಾರದ್ವಾಜಗೋತ್ರ ಅಶ್ವಲಾಯನಸೂತ್ರ. ತಾಳ್ಳಪಾಕ ಗ್ರಾಮವು ಈಗಿನ ಕಡಪ ಜಿಲ್ಲೆಯ ರಾಜಂಪೇಟೆ ತಾಲ್ಲೂಕಿನಲ್ಲಿದೆ ಇವರ ಪೂರ್ವಿಕರು ವೇದವೇದಾಂಗ ಪಾರಂಗತರು ಶುದ್ಧ ಭಾಗವತ ಶಿರೋಮಣಿಗಳು ಅನ್ನಮಾಚಾರ್ಯರ ತಂದೆಗ ಬಹುಕಾಲ ಮಕ್ಕಳಾಗಿರಲಿಲ್ಲ ದಂಪತಿಗಳು ತಿರುಪತಿಗ ಬಂದು ಸೇವೆ ಸಲ್ಲಿಸಿ ಪ್ರಾರ್ಥನೆ ಮಾಡಿಕೊಂಡಾಗ ಕನಸಿನಲ್ಲಿ ಶ್ರೀ ವೆಂಕಟೇಶ್ವರನ ಕತ್ತಿ (ನಂದಕ) ಕಾಣಿಸಿಕೊಂಡಿತಂತೆ ತಮ್ಮ ತಪಸ್ಸು ಫಲಿಸಿತೆಂದು ಹಿಂತಿರುಗಿದ ದಂಪತಿಗಳಿಗೆ ಪುತ್ರಪ್ರಾಪ್ತಿ ಮಗುವಿಗೆ "ಅನ್ನಮಯ್ಯ" ಎಂಬುವ ಹೆಸರನ್ನಿಟ್ಟರು

ಈ ಅನ್ನಮಯ್ಯ ಶಿಶು ದೇವರ ಮೇಲಿನ ಜೋಗುಳ ಹಾಡಿದ ಹೊರತು ನಿದ್ರಿಸುತ್ತಿರಲಿಲ್ಲವಂತೆ, ಹಾಲೂ ಅನ್ನ "ತಿರುವೇಂಗಡನ ಪ್ರಸಾದ" ಎಂದು ಉಚ್ಚರಿಸದೇ ಯಾವುದನ್ನೂ ಸ್ವೀಕರಿಸುತ್ತಿರಲಿಲ್ಲವಂತೆ ಹೀಗೆ ಸಹಜವಾಗಿ ದೈವ ಭಕ್ತಿ, ಶ್ರೀನಿವಾಸನ ಶಕ್ತಿ ಪ್ರಸಾದಗಳು ಕಿರಿವಯಸ್ಸಿನಲ್ಲೇ ಮಗುವಿನ ಮೇಲೆ ಪ್ರಭಾವ ಬೀರಲು ಮೊದಲಾಯಿತು ಮೇಲಾಗಿ ಅನ್ನಮಯ್ಯನ ತಂದೆತಾಯಿಗಳು ಭಕ್ತಿ ಪರಾಯಣರು ಅನ್ನಮಯ್ಯನಿಗೆ ಐದನೆಯ ವರ್ಷದಲ್ಲಿ ಉಪನಯನವಾಯಿತು ವಿದ್ಯಾಭ್ಯಾಸವು ಸಾಂಗವಾಗಿ ನೆರವೇರಿತು ಶ್ರೀನಿವಾಸನ ಪ್ರಸಾದದಿಂದ ಶ್ರಮವಿಲ್ಲದೆ ಗುರುಗಳು ಕಲಿಸಿದ ವಿದ್ಯೆಗಳನ್ನು ಏಕಸಂಧಿಗ್ರಾಹಿಯಾಗಿ ಕಲಿತ ಚಿಕ್ಕ ವಯಸ್ಸಿನಲ್ಲೇ ತಾನೇ ಶ್ರೀ ವೆಂಕಟೇಶ್ವರನನ್ನು ಕುರಿತು ಹಾಡುಗಳನ್ನು ರಚಿಸಿ ಭಕ್ತಿ ಪರವಶನಾಗಿ ಹಾಡುತ್ತಾ ನಲಿಯುತ್ತಾ ನರ್ತಿಸುತ್ತಾ ತನ್ನ ಕಾವ್ಯ ಗಾನಾಮೃತದಿಂದ ಎಲ್ಲರನ್ನೂ ಸಂತೋಷಪಡಿಸುತ್ತಿದ್ದನು ಒಮ್ಮೊಮ್ಮೆ ಏಕಾಗ್ರಪರವಶತೆಯಿಂದ ಧ್ಯಾನದಲ್ಲಿ ಮಗ್ನನಾಗುತ್ತಿದ್ದನು ದೈವಭಕ್ತಿ, ದೈವಚಿಂತನೆ ಅನಿರೀಕ್ಷಿತವಾಗಿ ಆತನಲ್ಲಿ ಹೆಚ್ಚಾಗುತ್ತಾ ಬಂತು ಒಂದು ದಿನ ಮುಂಜಾನೆ ಸುಂದರ ಸ್ವಪ್ನ ತಿರುವೆಂಕಟಾಚಲಾಧಿಪತಿಯ ದೇವಾಲಯ, ಬಂಗಾರದ ಗೋಪುರ, ರನ್ನದ ಹೊನ್ನಿನ ಬಾಗಿಲುಗಳು, ಶುಭ್ರವಾದ ವೆಂಕಟರಮಣನ ಶೇಷಾಚಲವಾಸನ ಗರ್ಭಗುಡಿ, ಪಂಕಜನಾಭನ ಪರಮ ಪವಿತ್ರನ, ಅತಿನೀಲ ಘನಶ್ಯಾಮ ನಳಿನಾಯತಲೋಚನ, ಶತಕೋಟಿ ಸೂರ್ಯ ತೇಜಸ್ಸಿನ ಶ್ರೀನಿವಾಸನ ಸುಂದರ ಮುಖದರ್ಶನ ಅಹೋ! ಅನ್ನಮಯ್ಯನ ಮೈಮನ ರೋಮಾಂಚನ ತಿರುಮಲೆಯ ತಿಮ್ಮಪ್ಪ ತನ್ನನ್ನು ಕೈ ನೀಡಿ ಕೂಗುತ್ತಿರುವಂತೆ ಭಾಸ ಭಾವ ತನ್ಮಯತೆ ಆದಿನ ದೆಳಗ್ಗೆ ಹಸುಗಳಿಗೆ ಹುಲ್ಲುತರಲು ಹೊರಟಾಗ ದಾರಿಯಲ್ಲಿ ಭಕ್ತರ ಕೂಟ ತಿರುಪತಿಗೆ ಹೊರಟಿತ್ತು ತಾಳ ಮೇಳಾದಿಗಳ



ಭಜನೆಯೊಡನೆ "ತಾಯಿ ತಂದೆ ದೈವ ಗುರುವು ಎಲ್ಲವೂ ನೀನೆ ಶ್ರೀನಿವಾಸ. ವೆಂಕಟೇಶ ವೇದವೇದ್ಯನೆ ಪಂಕಜಾಕ್ಷ ಪೊರೆಯೋ ನಮ್ಮನು ತ್ರಿವಿಕ್ರಮ, ತ್ರಿಕಾಲಜ್ಞ ತ್ರಿಧಾಮಾ ಕರುಣಾಕರ - ಎಲ್ಲವೂ ನೀನೇ ನಿನ್ನ ಬಳಿ ಬಂದು ಸೇವಿಸುವ" - ಎಂಬುವ ಭಕ್ತರ ಹಾಡನ್ನು ಕೇಳಿ ಅನ್ನಮಯ್ಯನ ಮೈಯಲ್ಲಿ ಭಕ್ತಿಯ ಭಾವ ದೇರೂರಿ ಹೃದಯದ ಕಮಲದಲ್ಲಿ ನೆಲೆಸಿದ್ದ ಉದಿಸುವ ಸೂರ್ಯನಂತೆ ಬೆಳಗುವ ಭಗವಂತ ತ್ರಿವಿಕ್ರಮನಾಗಿ ಎದ್ದು ನಿಂತ ಕೂಡಲೇ ಅನ್ನಮಯ್ಯ ಯಾರಿಗೂ ತಿಳಿಸದೆ ಆ ಭಕ್ತರ ಒಡಗೂಡಿ ಭಜನೆ ಮಾಡುತ್ತಾ ತಿರುಪತಿಯನ್ನು ಸೇರಿ, ತಿರುಮಲೆ ಬೆಟ್ಟ ಹತ್ತುತ್ತಾ ವೆಂಕಟೇಶ್ವರ ಶತಕವನ್ನು ರಚಿಸಿದ ಬೆಟ್ಟವನ್ನು ಹತ್ತುತ್ತಾ ದಣಿದು ದಾರಿಯಲ್ಲಿ ಬೆಳೆದಿದ್ದ ಬಿದಿರಿನ ಗಿಡಗಳ ಮಧ್ಯೆ ಬಳಲಿ ಬೆಂಡಾಗಿ ಹಸಿದು ಮಲಗಿದ ಜಗನ್ಮಾತೆ ಅಲುಮೇಲುಮಂಗೈ ವೃದ್ಧ ಸ್ತ್ರೀ ವೇಷದಲ್ಲಿ ದೇವರ ಪ್ರಸಾದವನ್ನು ನೀಡಿ ಸಂತೈಸಿ ಹರಿಸಿದಳು ತಿರುಮಲೆ ಸೇರಿ ಸ್ವಾಮಿ ಪುಷ್ಕರಣಿಯಲ್ಲಿ ಮಿಂದು ಮಡಿಯಲ್ಲಿ ಸ್ವಾಮಿದರ್ಶನಕ್ಕೆ ಬಂದಾಗ ದೇವರ ಗರ್ಭಗುಡಿಯ ಬಾಗಿಲುಗಳಿಗೆ ಬೀಗಹಾಕಿತ್ತು ನಿರಾಶೆಯಿಂದ ಸ್ವಾಮಿಯನ್ನು ಕುರಿತು ಹಾಡಿದ ತಕ್ಷಣವೇ ಬಾಗಿಲುಗಳು ತಾವಾಗಿಯೇ ತೆರೆದುಕೊಂಡವು. ಅರ್ಚಕರಿಗೆ ನೆರೆಹೊರೆಯವರಿಗೆ ಆಶ್ಚರ್ಯ ಈತನ ಮಹಿಮೆಯನ್ನು ಕಂಡ ಅವರು ಶ್ರೀನಿವಾಸನ ದರ್ಶನ ಮಾಡಿಸಿ ಗೌರವದಿಂದ ತೀರ್ಥ ಪ್ರಸಾದಗಳನ್ನು ನೀಡಿದರು ತಿರುಮಲೆಯಲ್ಲಿ ಒಬ್ಬಯತಿವರ್ಯರಿಂದ ಶ್ರೀ ವೈಷ್ಣವ ದೀಕ್ಷೆಯನ್ನು ಪಡೆದು ಅಲ್ಲಿ ಅವರಿಂದ ಅನೇಕ ಶಾಸ್ತ್ರಾರ್ಥಗಳನ್ನು ರಹಸ್ಯಾರ್ಥಗಳನ್ನು ಗ್ರಹಿಸಿದ ತಮ್ಮ ಗುರುವಿನ ಅಪ್ಪಣೆಯಂತೆ ಅಲ್ಲಿಗೆ ಹುಡುಕಿಕೊಂಡು ಬಂದ ತಾಯಿಯೊಡನೆ ತಾಳ್ಳಪಾಕಕ್ಕೆ ಹಿಂತಿರುಗಿದ ತಿರುಮಲಕ್ಕ ಮತ್ತು ಅಕ್ಕಲಮ್ಮ ಎಂಬ ಇಬ್ಬರು ಕನ್ಯಾರತ್ನಗಳನ್ನು ಮದುವೆಯಾಗಿ ಅಹೋಬಿಲಮಠದ ಯತಿಗಳಾದ ಶ್ರೀ ಶಠಕೋಪಯತಿವರ್ಯರಿಂದ ಮಂತ್ರೋಪದೇಶ ಚರನ್ಯಾಸ - ಅವರಿಂದ ಉಭಯವೇದಗಳ ಪಾರ - ಶ್ರೀ ವೈಷ್ಣವ ಗ್ರಂಥಗಳ ವ್ಯಾಸಂಗ - ಕಾಲಕ್ಷೇಪಗಳಿಂದ ಸರ್ವಶಾಸ್ತ್ರಗಳ ಪರಿಚಯ ಗೃಹಸ್ಥಾಶ್ರಮದೊಡನೆ ನಿತ್ಯವೂ ಹರಿಪೂಜೆ, ವಿಷ್ಣುಸಂಕೀರ್ತನೆ, ಧ್ಯಾನ ಮನನ ಕಾಲಕ್ಷೇಪದಿಂದ ಅನ್ನಮಯ್ಯನಲ್ಲಿ ವಿರಕ್ತಿ ಭಕ್ತಿ ಉಪಾಸನಾ ಶಕ್ತಿಗಳು ಬೆಳೆದವು. ಶ್ರೀನಿವಾಸನಲ್ಲಿ ಅಪಾರವಾದ ಭಕ್ತಿ ಬೆಳೆದು ಅವನನ್ನು ಕುರಿತು ಹಲವಾರು ಸಂಕೀರ್ತನೆಗಳನ್ನು ರಚಿಸಲಾರಂಭಿಸಿದರು ರಾಮಾಯಣ ಕಥಾಸಾಗರವನ್ನು ತನ್ನ ಸುಲಲಿತ ಪದ್ಯಗಳಲ್ಲಿ ರಚಿಸಿ ಹಾಡಲಾರಂಭಿಸಿದರು ಆಗ ಅವರಿಗೆ ಹದಿನಾರು ವರ್ಷವಯಸ್ಸು. ತಿರುವೇಂಕಟನಾಥನ ದರ್ಶನವಾದಮೇಲೆ ತಮಗೆ ಅವನಲ್ಲಿ ಅನನ್ಯ ಭಕ್ತಿ ಹುಟ್ಟಿತು ಎಂಬುವುದಾಗಿ ತಾವೇ ತಮ್ಮ "ಆಧ್ಯಾತ್ಮಸಂಕೀರ್ತನಲು" ಎಂಬ ಕೃತಿಯಲ್ಲಿ ತಿಳಿಸಿದ್ದಾರೆ ಕೆಲವು ವರ್ಷಗಳ ತರುವಾಯ ಅನ್ನಮಯ್ಯ ದೊರೆ ಸಾಳುವ ನರಸಿಂಹರಾಯನ ಆಸ್ಥಾನದಲ್ಲಿ ಆಶ್ರಯಪಡೆದಾಗ ಅಲ್ಲಿ ಶೃಂಗಾರ ಸಂಕೀರ್ತನಲು ಮತ್ತು ಶೃಂಗಾರ ಮಂಜರಿ ಎಂಬುವ ಕೃತಿಗಳ ರಚನೆ ಇವುಗಳಲ್ಲಿ ವೇಂಕಟೇಶ್ವರನು ನಾಯಕನೆಂದೂ ತಾನೂ ನಾಯಕಿಯೆಂದೂ ಭಾವಿಸಿಕೊಂಡು ಬರೆದ ಪ್ರೇಮ ಪ್ರಕರಣಗಳ ಪದ್ಯಗಳು ಇವೆ ಸುಮಾರು ಎಂಬತ್ತು ವರ್ಷಗಳ ಕಾಲ ತಿರುಮಲೆಯಲ್ಲಿ ದೇವರ ಸಂಕೀರ್ತನೆ ಮಾಡುತ್ತಾ ಮೂವತ್ತೆರಡು ಸಾವಿರದ ಸಂಕೀರ್ತನೆಗಳನ್ನು ಓಲೆಗರಿಗಳ ಮೇಲೆ ಬರೆಸಿ ಅದನ್ನು ತಿರುಮಲೆಯಲ್ಲಿ "ಸಂಕೀರ್ತನ ಭಂಡಾರ" ಎಂಬ ಗೂಡಿನಲ್ಲಿ ಭದ್ರಪಡಿಸಿದರು - ಈತನ ಹಿರಿಯ ಮಗ ಪೆದ್ದ ತಿರುಮಲಾಚಾರ್ಯರು ಅವುಗಳನ್ನು ತಾಮ್ರದ ತಗಡಿನಲ್ಲಿ ಅಂದವಾಗಿ ಬರೆಸಿ ಭದ್ರಪಡಿಸಿದನು ಅನ್ನಮಾಚಾರ್ಯರು ತೆಲುಗು ಸಂಸ್ಕೃತಗಳಲ್ಲಿ ತಮ್ಮ ಸಾಹಿತ್ಯ ಸಿದ್ಧಿ ಮತ್ತು ಸಂಗೀತ ಸುದೆಗಳನ್ನು ಈ ಲೋಕಕ್ಕೆ ಬಿಟ್ಟುಹೋಗಿದ್ದಾರೆ ತೆಲುಗಿನಲ್ಲಿ ಇವರಿಗಿಂತ ಹಿಂದೆ ಕೃಷ್ಣಮಾಚಾರ್ಯರು ಸಂಕೀರ್ತನೆ ದಾಟಿಯಲ್ಲಿ ರಚನೆಗಳನ್ನು ಮಾಡಿದ್ದರು ಆದರೂ ಅನ್ನಮಾಚಾರ್ಯರನ್ನೇ "ಪದಕವಿತಾಪಿತಾಮಹ"ನೆಂದು ತೆಲುಗು ಸಾಹಿತಿಗಳು ಗೌರವಿಸುತ್ತಾರೆ ಪುರಂದರದಾಸರು ಕನ್ನಡನಾಡಿನಲ್ಲಿ ದಾಸಕೂಟವನ್ನು ಅಭಿವೃದ್ಧಿಮಾಡಿದಂತೆ ಅನ್ನಮಾಚಾರ್ಯರು ಆಂಧ್ರದಲ್ಲಿ ತಮ್ಮ ಸಂಕೀರ್ತನೆಗಳಿಂದ ವಾಗ್ಗೇಯಕಾರ ಪರಂಪರೆಯನ್ನು ಕಟ್ಟಿ ಆಧ್ಯಾತ್ಮಿಕ ಮಾರ್ಗವನ್ನು ಜನರಿಗೆ ತೋರಿಸಿದರು ಇಬ್ಬರೂ ಸಮಕಾಲೀನರು ತಿರುಮಲೆಯಲ್ಲಿ ಇಬ್ಬರ ಸಮಾಗಮ ಒಂದೇ ಗುರಿ, ಶ್ರೀನಿವಾಸನ ಭಕ್ತಿ

## ಆಧ್ಯಾತ್ಮಿಕ ಪ್ರೌಢಿಮೆ

ಅನ್ನಮಾಚಾರ್ಯರು ಶ್ರೀ ವೈಷ್ಣವ ದೀಕ್ಷೆಯನ್ನು ಪಡೆದಿದ್ದರಿಂದ ಹಚ್ಚಿಗೆ ಆಳ್ವಾರ್ ಆಚಾರ್ಯರ ಪ್ರಬಂಧ ಶ್ರೀಸೂಕ್ತಿ ಶ್ಲೋಕಗಳ ಅರ್ಥ ಪ್ರತಿಪಾದನೆಗಳನ್ನು ಮಾಡುತ್ತಾ ತಮ್ಮ ಸಂಕೀರ್ತನೆಗಳಲ್ಲಿ ಅವುಗಳನ್ನು ಅಳವಡಿಸಿಕೊಂಡಿದ್ದಾರೆ ಭರತಖಂಡದಲ್ಲಿ ಪ್ರತ್ಯಕ್ಷವಾಗಿ ಪರೋಕ್ಷವಾಗಿಯೂ ಜನರ ರೂಢವಾದ ವಿವಿಧ ಯೋಗ ಮಾರ್ಗಗಳಲ್ಲಿ ಭಕ್ತಿಮಾರ್ಗವು ಸುಗಮವಾದುದು ಪ್ರೇಮ ಭಾವನೆ ಲೋಕಪ್ರಿಯವಾದುದು ಈ ಮಾರ್ಗ ಸರಲ, ಸುಲಭ ಹಾಗೂ ಉತ್ಕಟ ಭಕ್ತನ ಚರಣಾಂಬುಜದಲ್ಲಿ ಮೋಕ್ಷ ಸಾಮ್ರಾಜ್ಯಲಕ್ಷ್ಮಿ ಉರುಳಾಡುತ್ತಾಳೆ "ಯದಿ ಭವತಿ ಮುಕುಂದೇ ಭಕ್ತಿರಾನಂದ ಸಾಂದ್ರಾ, ವಿಲುಠತಿ ಚರಣಾಬ್ಜೇ ಮೋಕ್ಷ ಸಾಮ್ರಾಜ್ಯ ಲಕ್ಷ್ಮೀ:" ಈ ವಿಷಯವನ್ನೆ ಅನ್ನಮಾಚಾರ್ಯರು ತಮ್ಮಸಂಕೀರ್ತನೆಯಲ್ಲಿ "ಶ್ರೀಹರಿ ಪಾದತೀರ್ಥಮೇ ಚೆಡನಿ ಮಂದು, ಮೋಹ ಪಾಶಾಲ ಗೋನಿ ಮೋಕ್ಷಮಿಚ್ಚೇ ಮಂದು" ಎಂಬುವುದಾಗಿ ಶ್ರೀಹರಿ ಪಾದತೀರ್ಥ ಮೋಕ್ಷವನ್ನೀಯುವ ಪರಮ ಔಷದವೆಂದು ಕೊಂಡಾಡಿದ್ದಾರೆ ಕುಲಶೇಖರ ಆಳ್ವಾರರು ತಮ್ಮ ಮುಕುಂದ ಮಾಲೆಯಲ್ಲಿ ಹೇಳಿರುವ "ಭಕ್ತಾತ್ಯಂತ ಹಿತೌಷದಂ ಭವಭಯ ಪ್ರಧ್ವಂಸನೈಕೌಷಧಂ ಶ್ರೇಯಃ ಪ್ರಾಪ್ತಿ ಕರೌಷಧಂ ಪಿಬ ಮನಃ ಶ್ರೀಕೃಷ್ಣ ದಿವ್ಯೌಷಧಮ್" ಎಂಬುವ ಶ್ಲೋಕದ ದಾಟಿಯಲ್ಲೇ ಅನ್ನಮಾಚಾರ್ಯರ ಸಂಕೀರ್ತನೆ-

ಕೋನರೋ ಕೋನರೋ ಮೀರು
ಕೂರಿಮಿ ಮಂದು
ವುನಿಕಿ ಮನಿಕಿ ಕೆಲ್ಲ ಸೊಕ್ಕಟೇ ಮಂದು
ಧ್ರುವುಡು ಗೊನಿನ ಮಂದು ತೊಲ್ಲಿಯು
ಪ್ರಹ್ಲಾದುಂಡು
ಚವಿಗಾ ಗೊನಿನ ಮಂದು ಚಲ್ಲನಿ ಮಂದು
ಭವರೋಗಮುಲು ವೀಡಿ ಪಾರಂಗ
ಪೆದ್ದುಲು ಮುನ್ನು
ಜಪಕಟ್ಟು ಕೊನಿನ ನಿಚ್ಚಲಮೈನ ಮಂದು

ಧ್ರುವ, ಪ್ರಹ್ಲಾದ, ನಾರದ, ಬ್ರಹ್ಮ ರಾಜಶೇಖರು ಮಹಾಭಕ್ತರು ಖರೀದಿಸಿದ ಉದಾತ್ತವಾದ ಔಷಧಿಯನ್ನು ಕೊಳ್ಳಿ. ಭೌತಿಕ ಔಷಧಿ ಶಾರೀರಕ ರೋಗಗಳನ್ನು ಪರಿಹರಿಸುವಂತೆ ಶಾಶ್ವತ ಸುಖವನ್ನು ಕೊಡುವ ಶ್ರೀನಿವಾಸನೆಂಬ ಔಷಧವನ್ನು ಕೊಳ್ಳಿ ಎಂಬುವುದಾಗಿ ಅನ್ನಮಾಚಾರ್ಯರು ವಿಷ್ಣುನಾಮ ಸಂಕೀರ್ತನವೇ ಪರಮೌಷಧವೆಂದು ಸಾರಿದ್ದಾರೆ ಮತ್ತೊಂದು ಸಂಕೀರ್ತನೆಯಲ್ಲಿ ಈ ವಿಷಯವನ್ನೇ ಸ್ಪಷ್ಟವಾಗಿ ತಿಳಿಸುವಾಗ ವಿಷ್ಣುನಾಮ ವಿಮಲೌಷಧ - ಅದೇ ಭವ ಭಯವಿಮೋಚನ ಸಿದ್ಧೌಷಧ ಎಂಬುವುದಾಗಿ-

ಅನ್ನಿಟಿಕಿನಿದಿ ಪರಮೌಷಧಮು
ವೆನ್ನುನಿ ನಾಮಮೇ ವಿಮಲೌಷಧಮು
ಬಂದ ವಿಮೋಚನಂಬುನಕು
ಚಿತ್ರಜ ಗುರುಡೇ ಸಿದ್ಧೌಷಧಮು

- ಎಂಬುವುದಾಗಿ ಸಾರಿದ್ದಾರೆ

ಪಿಳ್ಳೈ ಲೋಕಾಚಾರ್ಯರ ಮುಮುಕ್ಷುಪಡಿ, ವೇದಾಂತದೇಶಿಕರ ರಹಸ್ಯಾರ್ಥಗಳನ್ನು ಅಧ್ಯಯನ

ಮಾಡಿದ ಅನ್ನಮಾಚಾರ್ಯರು ತಮ್ಮ ಹಲವಾರು ಸಂಕೀರ್ತನೆಗಳಲ್ಲಿ ತಿರುಮಂತ್ರದ ಮಹಿಮೆಯನ್ನು ಕೊಂಡಾಡಿದ್ದಾರೆ ಮನುಷ್ಯನು ಅವಶ್ಯಕವಾಗಿ ತಿಳಿಯದೇಕಾದ ತತ್ವ ಹಿತ, ಪುರುಷಾರ್ಥಗಳ ಜ್ಞಾನವು "ಓಂ ನಮೋ ನಾರಾಯಣಾಯ" ಎಂಬ ಮಹಾ ಮಂತ್ರದಲ್ಲಿ ಅಡಗಿದೆ ಅದಕ್ಕಾಗಿಯೇ ಈ ಮಂತ್ರವನ್ನು ತಿರುಮಂತ್ರವೆಂದು ಕರೆಯಲ್ಪಡುತ್ತದೆ ತಿರುಮಂತ್ರದಲ್ಲಿ ಚೇತನನ ಮತ್ತು ಪರಮಾತ್ಮನ ಸ್ವರೂಪ ವಿವರಣೆಗಳು ಪ್ರಧಾನವಾಗಿವೆ ನವವಿಧ ಭಕ್ತಿಯ ಸ್ವರೂಪ ತಿಳಿಯಬಹುದು ಸಂಪ್ರದಾಯ ಪ್ರಕಾರ ತಿರುಮಂತ್ರದಿಂದ ಪರಮಾತ್ಮನ ಜ್ಞಾನ ಚರಮ ಶ್ಲೋಕದಿಂದ ಪುರುಷ ಪ್ರಾಪ್ತಿಗೆ ಉಪಾಯಮಾರ್ಗ ತಿಳಿದು ದ್ವಯ ಮಂತ್ರದ ಮೂಲಕ ಧ್ಯಾನ ಮನನ, ಪ್ರಾರ್ಥನೆ ಶ್ರೀ ವೈಷ್ಣವ ಭಾಗವತರಿಗೆ ತಿರುಮಂತ್ರ, ಆಚಾರ್ಯಕೃಪೆ, ಭಾಗವತರ ದಾಸ್ಯ ಅತಿಮುಖ್ಯ ಇದನ್ನೇ ಅನ್ನಮಾಚಾರ್ಯರು ತಮ್ಮ ಸಂಕೀರ್ತನೆ ಯೊಂದರಲ್ಲಿ-

ನೀವಾರ್ಯೆನ ವಾರಿಕಿ ನೀವ್ವೆ ಭಕ್ತಿಕಾಕ
ಭಾವಿಂಚನೇರಕ ವಟ್ಟಿ (ಭ್ರಮ ಬಡವಲೆನಾ)
ಕರುಣಾನಿಧಿ ನೀವು ಗಲಿಗಿ ವುಂಡಗಾನು
ತಿರುಮಂತ್ರಮೇ ನಾಕು ದಿಕ್ಕಯಿ ವುಂಡಂಗಾ
ಬಲಿಮಿ ಶ್ರೀ ವೆಂಕಟೇಶ ಬಂಧವಿಮುಕ್ತುನಿ ಜೇಸಿ
ತಲಂಪುಲೋ ನೆಲಕೋನಿ
ದಯಂಜೂಡವಯ್ಯಾ

- ಎಂದು ಕೊಂಡಾಡಿದ್ದಾರೆ ಕುಲಶೇಖರರ -

ಮಜ್ಜನ್ಮನಃ ಫಲಮಿದಂ ಮಧುಕೈಟಭಾರೇ
ಮತ್ಪ್ರಾರ್ಥನೀಯ ಮದನುಗ್ರಹ ಏಷ ಏವ
ತ್ವದ್ಭೃತ್ಯ ಭೃತ್ಯ ಪರಿಚಾರಕ ಭೃತ್ಯ ಭೃತ್ಯ
ಭೃತ್ಯಸ್ಯ ಭೃತ್ಯ ಇತಿ ಮಾಂ ಸ್ಮರ ಲೋಕನಾದ

ಎಂಬುವ ಶ್ಲೋಕದ ಅರ್ಥವನ್ನೇ ತಮ್ಮ ಹಲವಾರು ಪದ್ಯಗಳಲ್ಲಿ ಹಾಡಿದ್ದಾರೆ

ಸ್ವಾಮಿ ನಾನು ನಿನ್ನನ್ನು ಪ್ರಾರ್ಥಿಸಿಕೊಳ್ಳುವುದು ನೀನು ನನಗೆ ಅನುಗ್ರಹಿಸದೇಕಾದ ವರ ಎಂದರೆ- ಎಲೈ ಲೋಕನಾದ ನಾನು ನಿನ್ನ ದಾಸನ ದಾಸನ ಪರಿಚಾರಕನ ದಾಸನ ದಾಸನ ದಾಸನ ಭೃತ್ಯನೆಂದು ನನ್ನನ್ನು ಅನುಗ್ರಹಿಸು

ಶ್ರೀ ಲೀಲಾಶಕರು ತಮ್ಮ ಕೃಷ್ಣಕರ್ಣಾಮೃತದಲ್ಲಿ ತಿಳಿಸಿರುವಂತೆ "ಸಂಧ್ಯಾವಂದನ ಭದ್ರಮಸ್ತು", (ಓ ಸಂಧ್ಯಾವಂದನವೇ ನಿನಗೆ ಒಳ್ಳಿತಾಗಲಿ ನಾನು ಕಂಸಾರಿಯನ್ನು ನೆನೆದು ಪುನೀತನಾಗುವೆ)



ಈ ಎಲ್ಲಾ ವಿಷಯಗಳನ್ನು ಅರಿತ ಅವರು ಪರಮಭಾಗವತರಾಗಿ ಅನ್ನಮಯ್ಯ ತಮ್ಮ ಸಂಕೀರ್ತನೆ ಒಂದರಲ್ಲಿ ಶ್ರೀ ವೈಷ್ಣವರ ಸಹವಾಸವೇ ತಮ್ಮ ಸಂಧ್ಯೆ ಶ್ರೀಹರಿ ಸಂಕೀರ್ತನ ಸತತವೂ ತಮ್ಮ ಸಂಧ್ಯೆ, ರಾಮಾನುಜಮತವೇ ನಮಗೆ ಶ್ರೇಷ್ಠ ಸಂಧ್ಯೆ ಪರಮ ಭಾಗವತರ ಸೇವೆಯೇ ತಮ್ಮ ಸಂಧ್ಯೆ, ತಿರುಮಂತ್ರ ಪರಣವೇ ಸದಾ ನಮ್ಮ ಸಂಧ್ಯೆ ಎಂಬುವುದಾಗಿ ತಿಳಿಸಿದ್ದಾರೆ

ಸಹಜ ವೈಷ್ಣವಾಚಾರ ವರ್ತನುಲ
ಸಹವಾಸಮೇ ಮಾ ಸಂಧ್ಯ
ಅತಿಶಯಮಗು ಶ್ರೀಹರಿ ಸಂಕೀರ್ತನ
ಸತತಂಬುನು ಮಾ ಸಂಧ್ಯ
ಮತಿ ರಾಮಾನುಜ ಮತಮೇ ಮಾಕುನು
ಚತುರತ ಮೆರಸಿನ ಸಂಧ್ಯ
ಪರಮ ಭಾಗವತ ಪದ ಸೇವನಮೇ
ಸರವಿನೆನ್ನ ಮಾ ಸಂಧ್ಯ..
ತಿರುಮಂತ್ರ ಪರನಮೇ ಸಂತತಮು ಮಾಸಂಧ್ಯ

ಈ ವಿಷಯವನ್ನೇ ತಿರುಮಂತ್ರ ಪ್ರಕರಣದಲ್ಲಿ ಪಿಳ್ಳೈ ಲೋಕಾಚಾರ್ಯರು ವಾಕ್ಯ- "ಸರ್ವ ಶೇಷಿಯಾನ ನಾರಾಯಣನುಕ್ಕೇ ಎಲ್ಲಾ ಅಡಿಮೈಗಳುಮ್ ಶೆಯ್ಯಪ್ಪೆರು ವೇನಾಗವೇಣುಂ ಎನ್ರದಾಯತ್ತು" ಪರಮಾತ್ಮನಿಗೆ ದಾಸನಾದ ನಾನು, ಸ್ವತಂತ್ರನಲ್ಲ ಭಗವಂತನಿಗೆ ಪರತಂತ್ರ ನಾರಾಯಣನೇ ನನಗೆ ಸ್ವಾಮಿ ಅವನೇ ರಕ್ಷಕನಾಗಿದ್ದರಿಂದ ನಾನು ಅವನಲ್ಲಿ ಸರ್ವದಾ ಮೊರೆಹೋಗುತ್ತೇನೆ - ಎಂಬುವುದಾಗಿ ತಿಳಿಸಿದ ತಿರಳು

ಅನ್ನಮಾಚಾರ್ಯರು ತಮ್ಮ ಕೀರ್ತನೆಗಳಲ್ಲ ಅರ್ಥಪಂಚಕ ಜ್ಞಾನವನ್ನು ತಿಳಿಯಪಡಿಸಿ ಪರಮಾತ್ಮನ ಪರ ವ್ಯೂಹ, ವಿಭವ, ಅರ್ಚಾರಾವತಾರವಿಶೇಷಗಳ ಮಹಿಮೆ ತಿಳಿಸಿದ್ದಾರೆ ವೆಂಕಟಾಚಲದಲ್ಲಿ ಭಕ್ತರ ಅಭೀಷ್ಟಗಳನ್ನು ತೀರಿಸಲು ಪರವಾಸುದೇವನು ವೈಕುಂಠದಿಂದ ಧರೆಗೆ ಇಳಿದು ಬಂದು ಇಲ್ಲಿ ತನ್ನ ದಿವ್ಯಮಂಗಳ ವಿಗ್ರಹದಿಂದ ಪೂಜೆಗೊಳುತ್ತಿದ್ದಾನೆ. ವರಗಳನ್ನು ನೀಡುವ ವರದರಾಜನು ಅವನು, ಇದನ್ನೇ ಅನ್ನಮಾಚಾರ್ಯರು-

ವೇಡುಕೊಂದಾಮಾ ವೆಂಕಟಗಿರಿ
ವೆಂಕಟೇಶ್ವರುನಿ || ಪಲ್ಲವಿ ||

ಆಮಟಿ ಮ್ರೊಕ್ಕುಲ ವಾಡೇ
ಆದಿದೇವುಡೇ ವಾಡ
ತೋಮನಿ ಪಳ್ಳಾಲವಾಡೇ ದುರಿತ ದೂರುಡೇ

ವಡ್ಡಿ ಕಾಸುಲ ವಾಡೇ ವನಜ ನಾಭುಡು ಪುಟ್ಟು
ಗೊಡ್ಡುರಾಂಡ್ರಕು ಬಿಡ್ಡಲಿಚ್ಚೆ ಗೋವಿಂದುಡೇ
ಎಲಮಿಗೋರಿನ ವರಾಲಿಚ್ಚೆ ದೇವುಡೇ ವಾಡು
ಅಲಮೇಲ್ಮಂಗಾ ಶ್ರೀ ವೆಂಕಟಾದ್ರಿ ನಾಥುಡೇ||

ಎಂಬುವ ಕೀರ್ತನೆಯಲ್ಲಿ ಹಾಡಿ ಜನರು ಅವನನ್ನು ಮೊರೆಹೋಗುವಂತೆ ತಿಳಿಸಿದ್ದಾರೆ. ಶೇಷಾಚಲದಲ್ಲಿ ನೆಲೆಸಿರುವ ಶ್ರೀನಿವಾಸನನ್ನು ಕುರಿತು ಅನ್ನಮಾಚಾರ್ಯರ ಶ್ರೀರಾಗದ ಸಂಕೀರ್ತನೆ ಸುಪ್ರಸಿದ್ಧ, ಮನೋಹರವಾದುದು ಹೃದಯಾನಂದವೀಯುವುದು.

ಅದಿವೋ ಅಲ್ಲದಿವೋ ಹರಿವಾಸಮು
ಪದಿವೇಲ ಶೇಷುಲ ಪಡಗಲ ಮಯಮು||ಪ||

ಅದೇ ವೆಂಕಟಾಚಲ ಮಖಿಲೋನ್ನತಮು
ಅದಿವೋ ಬ್ರಹ್ಮಾದುಲ ಕಪುರೂಪಮು
ಅದಿವೋ ನಿತ್ಯ ನಿವಾಸ ಮಖಿಲ ಮುನುಲಕು
ಅದೆ ಚೂಡುಂಡದೆ ಮ್ರೊಕ್ಕುಡಾನಂದ
ಮಯಮು || ಚ ||

ಚೆಂಗಟ ನಲ್ಲದಿವೋ ಶೇಷಾ ಚಲಮು
ನಿಂಗಿ ನುನ್ನ ದೇವತಲ ನಿಜವಾಸಮು
ಮುಂಗಿಟ ನಲ್ಲದಿವೋ ಮೂಲನುನ್ನ ಧನಮು
ಬಂಗಾರು ಶಿಖರಾಲ ಬಹು ಬ್ರಹ್ಮಮಯಮು

ಕೈವಲ್ಯ ಪದಮು ವೆಂಕಟನಗ ಮದಿವೋ
ಶ್ರೀ ವೆಂಕಟ ಪತಿಕಿ ಸಿರುಲೈನದಿ
ಭಾವಿಂಪ ಸಕಲ ಸಂಪದ ರೂಪ ಮದಿವೋ
ಪಾವನ ಮುಲಕೆಲ್ಲ ಪಾವನ ಮಯಮು || ಚ ||

ವೆಂಕಟಾಚಲದಲ್ಲಿ ಬೀದಿ ಬೀದಿಗಳಲ್ಲಿ ಹರಿನಾಮ ಸಂಕೀರ್ತನೆ ಮಾಡುತ್ತಾ ಅನ್ನಮಾಚಾರ್ಯರು ಆ ದಿವ್ಯ ನಾಮಗಳ ಒಡೆಯುವ ಮಹಿಮೆಯನ್ನು ಜನರಿಗೆ ತಿಳಿಸುವ ಭಕ್ತಿ ಒಲುಮೆಯ ಸಂಕೀರ್ತನೆ - ಅಲ್ಲಿನೋಡಿ, ಅಲ್ಲಿನೋಡಿ ಶ್ರೀಹರಿ ನಿವಾಸ, ಹತ್ತುಸಾವಿರ ಶೇಷರುಗಳ ಹೆಡೆಗಳಮಯವು ಎಂದು ತಿರುಮಲೆಯನ್ನು ವರ್ಣಿಸುತ್ತಾ - ಕೇಳೀರಿ ನೀವು ವಿಷ್ಣುಕಥೆ, ಕೇಳೀ ನೀವು ಈ ಭಾಗ್ಯದ ಕಥೆ ಆದಿಯಿಂದ ಸಂಧ್ಯಾದಿ ವಿಧಿಗಳಲ್ಲಿ ವೇದ್ಯವಾದುದು ವಿಷ್ಣುಕಥೆ ನಾರದ ತುಂಬುರರಿಂದ ಬೀದಿ ಬೀದಿಗಳಲ್ಲಿ ನಾದಮಯವಾಯಿತು ವಿಷ್ಣುಕಥೆ ಈ ಅನ್ನಮಾಚಾರ್ಯರ ಗೀತೆ ಭಕ್ತರ ಹೃದಯಗಳನ್ನು ಮಾಟುತ್ತವೆ ನಮಗೆ ಸಾಂತ್ವನ ನೀಡುತ್ತದೆ

ವಿನರೋ ಭಾಗ್ಯಮು ವಿಷ್ಣುಕಥ
ವೆಲುಪಲ ನಿದಿವೋ ವಿಷ್ಣುಕಥ
ಆದಿನುಡಿ ಸಂಧ್ಯಾದಿ ವಿಧುಲಲೋ
ವೇದಂಬಯಿನದಿ ವಿಷ್ಣುಕಥ
ನಾದಿಂಚೀನಿದೇ ನಾರದಾದುಲ ಚೆ
ವೀಧಿ ವೀಧುಲನೆ ವಿಷ್ಣುಕಥ

ಪದ ಪದ ಜೋಡನೆ, ಭಾವಗಳ ಬೋಧನೆ, ಹೃದಯಂಗಮವಾದುವು. ಶ್ರೀ ವಿಷ್ಣು ಸಹಸ್ರನಾಮದಲ್ಲಿ ಅಂತ್ಯದಲ್ಲಿ ನಾವೂ ದಿನವೂ ಪಠಿಸುವ ಶ್ಲೋಕ-

ಶಂಖ ಭೃನ್ನಂದಕೀ ಚಕ್ರೀ
ಶಾರ್ಙ್ಗಧನ್ವಾ ಗದಾಧರ:
ರಥಾಂಗ ಪಾಣಿ ರಕ್ಷೋಭ್ಯ:
ಸರ್ವ ಪ್ರಹರಣಾಯುಧ:
ಶ್ರೀ ಸರ್ವ ಪ್ರಹರಣಾಯುಧ ಓಂ ನಮ ಇತಿ

ಶ್ರೀಹರಿಯು ಪಾಂಚಜನ್ಯವೆಂಬ ಶಂಖ, ನಂದಕವೆಂಬ ಖಡ್ಗ, ಸುದರ್ಶನವೆಂಬ ಚಕ್ರ, ಶಾರ್ಙ್ಗವೆಂಬ ಬಿಲ್ಲು ಕೌಮೋದಕೀಯೆಂಬ ಗದೆ, ಇವುಗಳನ್ನು ಸದಾ ಕೈಯಲ್ಲಿ ಧರಿಸಿರುವವನು ಶರಣಾಗತರಿಗೆ (ಅಕ್ಷೋಭ್ಯ:) ಅಭಯ ಪ್ರದಾನಮಾಡುವನೆಂಬ ದೃಢವಾದ ತನ್ನ ವ್ರತದಿಂದ ಯಾವ ಕಾರಣಕ್ಕೂ ಚಲಿಸದ ಮಹಿಮಾವಂತನು, ಸರ್ವಪ್ರಹರಣಾಯುದ: ಅಂದರೆ ತನ್ನನ್ನು ಆಶ್ರಯಿಸಿದವರಿಗೆ ಸಕಲ ದು:ಖಗಳನ್ನೂ ಪರಿಹರಿಸುವ ಅಪರಿಮಿತ ಶಕ್ತಿಯುಳ್ಳ ತನಗೆ ಅಪರಿಚ್ಛೇದ್ಯಗಳಾದ ಆಭರಣಗಳಿಂತಿರುವ ಅಸಂಖ್ಯಾತವಾದ ದಿವ್ಯ ಆಯುಧಗಳನ್ನುಳ್ಳ ಶ್ರಿಯ:ಪತಿಯು ಜ್ಞಾನ, ಶಕ್ತಿ ಬಲ ಐಶ್ವರ್ಯ ವೀರ್ಯ ತೇಜಸ್ಸುಗಳೆಂಬ ಷಡ್ಗುಣ ಪರಿಪೂರ್ಣನು ಅಂತಹ ಸ್ವಾಮಿಯ ಪಂಚಾಯುಧಗಳನ್ನು ಅನ್ನಮಾಚಾರ್ಯರು ತಮ್ಮ ದಿವ್ಯ ಕೀರ್ತನೆಯಲ್ಲಿ ಕೊಂಡಾಡುವ ಪರಿ ಹೀಗಿದೆ-

ಅಂಬರೀಷುಚೆ ಕೊನ್ನ ಆಪದಲನ್ನಿಯು ಬಾಪಿ
ದೆಂಬಡಿ ಗಾಚೆ ನೀಚೇ ಪೆನು ಚಕ್ರಮು
ಅಂಬರಾನನುನ್ನ ಧ್ರುವುನ ಜ್ಞಾನ ಮೆಲ್ಲಬಾಪೆ
ಪಂಚೆನ ಚೇತುನನ್ನ ಪಾಂಚಜನ್ಯಮು
ಪಕ್ಕನು ಜರಾಸಂಧು ಬಲಮೆಲ್ಲನುಗ್ಗಾಡಿ
ನಿಕ್ಕಮು ಮಧುರನಿಲ್ಪೆ ನೀಚೇ ಗದ
ತೊಕ್ಕಿ ಹಿರಣ್ಯಕಶಿಪುದಿನಿಮಿ ಪ್ರಹ್ಲಾದುಗಾಚೆ
ನಿಕ್ಕಿನಿಕ್ಕಿ ಮೆ ರಸೇಟಿ ನೀ ಖಡ್ಗಮು
ವೆಡ ರಾವಣುನಿ ಜಂಪಿ ವಿಭೀಷಣುಗಾಚೆ
ದೆಡಿ ಮುಡಿ ಪಡಕ ನೀಚೇ ಶಾರ್ಙ್ಗಮು

ಶ್ರೀ ವೈಷ್ಣವ ಸಂಪ್ರದಾಯದಲ್ಲಿ ಪಂಚಾಯುಧಗಳು ವಿಷ್ಣುನಾಮಸ್ಮರಣೆಯಷ್ಟೇ ಪುಣ್ಯಪ್ರದಾನವಾದವು. ಭಕ್ತರನ್ನು ವಿಷ್ಣುವಿನ ಪಂಚಾಯುಧಗಳು ವಿಷ್ಣುಭಕ್ತರನ್ನು ಹೇಗೆ ಆಪತ್ತುಗಳಲ್ಲಿ ಕಾಪಾಡಿವೆ ಎಂಬುವುದಾಗಿ ಮೇಲಿನ ಕೀರ್ತನೆಯಲ್ಲಿ ಆಚಾರ್ಯರು ಅಂಬರೀಷನ ಆಪತ್ತುಗಳನ್ನು ನಿವಾರಿಸಿ ಕಾಪಾಡಿತು ನಿನ್ನ ಚಕ್ರಸ್ವಾಮಿ ಅಂಬರದಲ್ಲಿರುವ ಬಾಲಧ್ರುವನ ಅಜ್ಞಾನ ಹೋಗಲಾಡಿಸಿ ಕಾಪಾಡಿತು ನಿನ್ನ ಪಾಂಚಜನ್ಯ, ಜರಾಸಂಧಾದಿಗಳನ್ನು ನಿನ್ನ ಗದೆ ನಾಶಮಾಡಿ ಮಧುರೆಯನ್ನು ಕಾಪಾಡಿತು ಹಿರಣ್ಯಕಶಿಪುವನ್ನು ಕೊಂದು ಭಕ್ತ ಪ್ರಹ್ಲಾದನನ್ನು ಕಾಪಾಡಿತು ನಿನ್ನ ಖಡ್ಗ ರಾವಣನನ್ನು ಸಂಹಾರಮಾಡಿ ವಿಭೀಷಣನ ರಕ್ಷಣೆ ನೀಡಿತು ನಿನ್ನ ಕೋದಂಡ ಶಾರ್ಙ್ಗ ಇತ್ಯಾದಿ ಅನ್ನಮಾಚಾರ್ಯರ ಆಧ್ಯಾತ್ಮಿಕ ಅಭಿರುಚಿ ಅಪಾರ ಅವುಗಳ ಅಂತರಾರ್ಥಗಳನ್ನು ಕೆಲವು ಕೀರ್ತನೆಗಳ ಉದಾಹರಣೆ ಸಾಲದು ಅವರ ವೈವಿಧ್ಯಮಯ ಆಧ್ಯಾತ್ಮಿಕ ಅಂತರಂಗದ ಅವಿಷ್ಕಾರಕ್ಕೆ ಹಲವಾರು ಲೇಖನಗಳು ಅವಶ್ಯಕ



## ತಿರುಪತಿಯಲ್ಲಿ ವಸತಿಗಾಗಿ ಸೂಚನೆ

ತಿರುಪತಿಯಲ್ಲಿ ವಸತಿಗಾಗಿ ಮುಂಗಡ ಕಾಯ್ದಿರಿಸುವಿಕೆಗಾಗಿ ಯಾತ್ರಿಕರು ಹಣವನ್ನು ಎಂ ಓ ಮೂಲಕ ಕಳುಹಿಸುವುದನ್ನು ಸ್ವೀಕರಿಸಲಾಗುವುದಿಲ್ಲ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್) ತಿ.ತಿ.ದೇ ತಿರುಪತಿ ಅಥವಾ ಎಕ್ಸಿಕ್ಯೂಟಿವ್ ಆಫೀಸರ್ ತಿ ತಿ ದೇ ತಿರುಪತಿ ಇವರ ಹೆಸರಿನಲ್ಲಿ ಡಿ ಡಿ ಯನ್ನು ಕಳುಹಿಸಬೇಕು. ಡಿ.ಡಿ. ಯ ಜೊತೆಗೆ ಬರುವ ದಿನಾಂಕ, ಬರುವವರ ಸಂಖ್ಯೆ ತಿರುಪತಿಯಲ್ಲಿ ವಸತಿಯನ್ನು ಕಾಯ್ದಿರಿಸಬೇಕಾದ ದಿನಾಂಕಗಳನ್ನು ಬರೆದು ಕಳುಹಿಸಬೇಕು

**ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್,**
(ರಿಸೆಪ್ಷನ್) ತಿ.ತಿ.ದೇ., ತಿರುಪತಿ



## ದಾಸಸಾಹಿತ್ಯ ಪ್ರಾಜೆಕ್ಟ್

# ಮೆಟ್ಟಿಲೋತ್ಸವ



ತಿರುಮಲೆ - ತಿರುಪತಿ ದೇವಸ್ಥಾನಗಳ ದಾಸಸಾಹಿತ್ಯ ಪ್ರಾಜೆಕ್ಟ್ ವತಿಯಿಂದ ವಾರ್ಷಿಕ ಮೆಟ್ಲೋತ್ಸವ 1998 ನೇ ಡಿಸೆಂಬರ್ 22 ರಂದು ಮಂಗಳವಾರ ಘನವಾಗಿ ನಡೆಯಿತು ಐದುಸಾವಿರಕ್ಕೂ ಹೆಚ್ಚು ಜನ ಮೆಟ್ಟಿಲ ಪೂಜೆಯಲ್ಲಿ, ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ನೇತೃತ್ವದಲ್ಲಿ ನಿರಂತರ ಹರಿಭಜನೆ ಮಾಡುತ್ತ ಬೆಟ್ಟವನ್ನೇರಿ ಸ್ವಾಮಿಯನ್ನು ದರ್ಶಿಸಿ ಆನಂದಿಸಿದರು

ಮೆಟ್ಟಿಲ ಉತ್ಸವ ಕಾರ್ಯಕ್ರಮಗಳು ಡಿಸೆಂಬರ್ 20 ರಂದು ತಿರುಪತಿಯಲ್ಲಿ ಆರಂಭವಾದವು ಆಂಧ್ರಪ್ರದೇಶ, ಕರ್ನಾಟಕ, ತಮಿಳುನಾಡುಗಳಿಗೆ ಸೇರಿದ ಸುಮಾರು 150 ಕ್ಕೂ ಮಿಕ್ಕಿದ ಭಜನ ವೃಂದಗಳಲ್ಲಿನ ಐದು ಸಾವಿರಕ್ಕೂ ಮೀರಿದ ಭಕ್ತಜನ ಎರಡು ಮೂರನೇ ಸತ್ರಗಳಲ್ಲಿ 20 ನೇ ತಾರೀಖಿನಂದೇ ಸೇರಿದ್ದರು ಇಲ್ಲಿ ಎರಡು ದಿನ - 20, ಹಾಗೂ 21 ರಂದು ಅವರ ಸಾಮೂಹಿಕ ಭಜನಗೋಷ್ಠಿಕಾರ್ಯಕ್ರಮಗಳು, ದಾಸಸಾಹಿತ್ಯದ ರಸಪ್ರಶ್ನೆ ಕಾರ್ಯಕ್ರಮ, ಭಜನ ಸ್ಪರ್ಧೆ ಕಾರ್ಯಕ್ರಮಗಳು ನಡೆದವು ಉಡುಪಿಯ ಫಲಿಮಾರು ಮಠದ ಶ್ರೀವಿದ್ಯಾಧೀಶ ತೀರ್ಥ ಶ್ರೀಪಾದಂಗಳು ಭಂಡಾರ ಕೇರಿ ಮಠದ ಶ್ರೀ ವಿದ್ಯೇಶ ತೀರ್ಥ ಶ್ರೀಪಾದಂಗಳು ಭಕ್ತಜನರಿಗೆ ಸೂಚನೆ ಸಲಹೆ ಧಾರ್ಮಿಕ ಸಂದೇಶಗಳನ್ನು ನೀಡಿದರು ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು ಅನುಗ್ರಹ ಭಾಷಣದಲ್ಲಿ ಭಕ್ತಿಯ ಪಾರಮ್ಯವನ್ನು ವಿವರಿಸಿದರು

21 ರಂದು ಮಧ್ಯಾಹ್ನ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದಿಂದ ತಿರುಪತಿಯ ಪುರವೀಧಿಗಳಲ್ಲಿ ಹರಿದಾಸರ ಮೆರವಣಿಗೆ ನಡೆಯಿತು ಮಕ್ಕಳು ವೃದ್ಧರೆನ್ನದೆ, ಗಂಡುಹೆಣ್ಣೆನ್ನದೆ, ಎಲ್ಲರೂ ಗೋವಿಂದನಾಮಸ್ಮರಣೆ ಮಾಡುತ್ತ, ಹರಿದಾಸರ ಕೀರ್ತನೆಗಳನ್ನು ಪಲುಕುತ್ತ ಗೆಜ್ಜೆಕಟ್ಟಿ ಹೆಜ್ಜೆ ಹಾಕಿ ಪುರವೀಧಿಗಳಲ್ಲಿ ನಡೆಯುತ್ತಿದ್ದರೆ ಹರಿ ಪರಿಷತ್ತು ಧರೆಗಿಳಿದಂತೆ ತೋರಿತು ಊರ ಮೆರವಣಿಗೆ ತ್ಯಾಗರಾಜ ಮಂಟಪವನ್ನು ಸೇರಿದ ಮೇಲೆ ಹರಿದಾಸ ಸಂಧ್ಯೆ ಕಾರ್ಯಕ್ರಮ ನಡೆಯಿತು ತಿ ತಿ ದೇ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ರಾಮಕೃಷ್ಣಯ್ಯನವರು ಸಭೆಯಲ್ಲಿ ಮಾತನಾಡುತ್ತ ಹರಿನಾಮ ಸ್ಮರಣೆಯಿಂದ ಉಂಟಾಗುವ ಆನಂದ ದೇರೆಲ್ಲ ಸುಖ ಸಂಪದಕ್ಕಿಂತ ಹೆಚ್ಚಿನ ಆನಂದ ತರುತ್ತದೆಯೆಂದೂ, ಇದಕ್ಕಾಗಿಯೇ ಹರಿದಾಸರಲ್ಲಿನ

ಹರಿದಾಸ ಸಂಧ್ಯೆ ಕಾರ್ಯಕ್ರಮದಲ್ಲಿ ಶ್ರೀಗಳ ಅನುಗ್ರಹಭಾಷಣ, ಪುಸ್ತಕಗಳ ಬಿಡುಗಡೆ ನಡೆಯಿತು



ತಿರುಮಲೆಯಲ್ಲಿ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದಿಂದ ಶ್ರೀ ತ್ಯಾಗರಾಜ ಮಂಟಪದವರೆಗೆ ಊರ ಮೆರವಣಿಗೆಯಲ್ಲಿ ಹರಿದಾಸರು ಹಾಡುತ್ತ ನಡೆದರು
ಶ್ರೀ ಅಪ್ಪಣ್ಣಾಚಾರ್ಯ, ಶ್ರೀ ಶ್ರೀ ವಿದ್ಯಾಧೀಶ ತೀರ್ಥರು, ಜೆ.ಇ.ಓ. ಶ್ರೀ ರಾಮಕೃಷ್ಣಯ್ಯ ಮೊದಲಾದವರೂ ಊರಮೆರವಣಿಗೆಯಲ್ಲಿ ಪಾಲುಗೊಂಡರು
ಹರಿದಾಸ ವೇಷ ತೊಟ್ಟಿ ಮಕ್ಕಳೂ ಭಾಗವಹಿಸಿದ್ದರು

ಎಲ್ಲರೂ ತಪಿಸಿದರೆಂದೂ ಹೇಳುತ್ತ ದಾಸಸಾಹಿತ್ಯ ಪ್ರಾಜೆಕ್ಟ್‌ನ ಪುಸ್ತಕಗಳನ್ನು ಬಿಡುಗಡೆ ಮಾಡಿದರು. ನಂತರ ಫಲಿಮಾರು ಮಠದ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು ಭಜನ ವೃಂದಗಳಿಗೆ ಜ್ಞಾಪಿಕೆಗಳನ್ನು ನೀಡಿದರು ಆ ಮೊದಲಿಗೆ ಮೂವರು ಶ್ರೀಪಾದಂಗಳ ಸಮ್ಮುಖದಲ್ಲಿ ನಡೆದ ಭಜನ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಬಹುಮಾನಗಳನ್ನು ನೀಡಲಾಯಿತು. ಚಿಂತಾಮಣಿಯ ಶ್ರೀ ರಾಘವೇಂದ್ರಭಜನ ಮಂಡಳಿ ಹಾಗೂ ಮುಂಬಯಿನ ಶ್ರೀ ಗುರುಸಾರ್ವಭೌಮ ಭಜನ ಮಂಡಳಿಗಳಿಗೆ ಪ್ರಥಮ ಬಹುಮಾನ ಸಂಯುಕ್ತವಾಗಿ ದೊರೆಯಿತು ದ್ವಿತೀಯ ಸ್ಥಾನದಲ್ಲಿ ಬೆಂಗಳೂರಿನ ಶ್ರೀ ಪರಿಮಳ ಭಜನ ಮಂಡಳಿಯವರೂ, ತೃತೀಯಸ್ಥಾನದಲ್ಲಿ ಬೆಂಗಳೂರಿನ ಶ್ರೀ ಪದ್ಮಾವತೀ ಭಜನಮಂಡಳಿಯವರೂ ಬಹುಮಾನ ಪಡೆದರು.

ಡಿಸೆಂಬರ್ 21 ರಂದು ಬೆಳಗ್ಗೆ ತಿರುಪತಿಯ ಅಲಿಪಿರಿಯ ಬಳಿ ಮೂವರೂ ಶ್ರೀಪಾದಂಗಳವರ ಸನ್ನಿಧಿಯಲ್ಲಿ ಮೆಟ್ಟಿಲ ಪೂಜೆ ನಡೆಯಿತು ಈ ಕಾರ್ಯಕ್ರಮದಲ್ಲಿ ತಿ ತಿ ದೇ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀರಾಮಕೃಷ್ಣಯ್ಯ, ಅರಣ್ಯಾಧಿಕಾರಿ ಶ್ರೀ ವೆಂಕಟ್ರಾಮಯ್ಯ ಮೊದಲಾದವರೂ ಪಾಲುಗೊಂಡರು ಮೆಟ್ಟಿಲ ಪೂಜೆ ಮಾಡುತ್ತ ಸ್ವಾಮಿಗಳೊಂದಿಗೆ ಭಜನ ಬೃಂದಗಳು ಉತ್ಸಾಹ ಸಂಭ್ರಮಗಳಿಂದ ಬೆಟ್ಟವನ್ನೇರಿ ತಿರುಮಲೆಯನ್ನು ಸೇರಿದವು ತಿ ತಿ ದೇ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಅವರು ಭಜನ ವೃಂದಗಳನ್ನೂ ಶ್ರೀಪಾದಂಗಳನ್ನೂ ತಿರುಮಲೆಗೆ ಸ್ವಾಗತಿಸಿದರು ಮೆರವಣಿಗೆಯ ನಂತರ ವೈಕುಂಠಂ ಕ್ಯೂಕಾಂಪ್ಲೆಕ್ಸ್ ಮೂಲಕ ಎಲ್ಲರೂ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸಿದರು

ಮೆಟ್ಲೋತ್ಸವದಲ್ಲಿ ಪಾಲ್ಗೊಂಡ ಭಕ್ತರೆಲ್ಲರಿಗೂ ತಿ ತಿ ದೇ ಗಳ ವತಿಯಿಂದ ಉಚಿತ ವಸತಿ, ಭೋಜನ ಸೌಕರ್ಯಗಳನ್ನು ತಿರುಪತಿ ಹಾಗೂ ತಿರುಮಲೆಗಳಲ್ಲಿ ಒದಗಿಸಿ, ಪ್ರತಿಯೊಬ್ಬರಿಗೂ ಸ್ವಾಮಿದರ್ಶನದ ನಂತರ ಪ್ರಸಾದವನ್ನು ಉಚಿತವಾಗಿ ನೀಡಲಾಯಿತು ಪ್ರತಿ ಭಜನ ವೃಂದಕ್ಕೂ ಭಜನ ಪರಿಕರಗಳನ್ನು ಪಕ್ಕವಾದ್ಯಗಳನ್ನು ಕೊಳ್ಳಲು ಪ್ರೋತ್ಸಾಹದನವಾಗಿ ರೂ 1500/- ಅನ್ನು ನೀಡಲಾಯಿತೆಂದು ಮೆಟ್ಲೋತ್ಸವದ ನೇತೃತ್ವ ವಹಿಸಿದ ದಾಸಸಾಹಿತ್ಯ ಪ್ರಾಜೆಕ್ಟ್ ವಿಶೇಷಾದಿಕಾರಿ ಶ್ರೀ ಕೆ ಅಪ್ಪಣ್ಣಾಚಾರ್ಯ ತಿಳಿಸಿದರು







ದಾಸಸಾಹಿತ್ಯದ ರಸಪ್ರಶ್ನೆ ಕಾರ್ಯಕ್ರಮದಲ್ಲಿ ಪ್ರಥಮ ಬಹುಮಾನ ಪಡೆದ ಚಿಂತಾಮಣಿಯ ತಂಡಸ್ವಾಮಿಜೀಯವರಿಂದ ಬಹುಮಾನ ಪಡೆದಾಗ ತೆಗೆದ ಚಿತ್ರದೊಡನೆ ಸಭೆಯ ಎರಡು ನೋಟಗಳು, ಹರಿದಾಸರ ಭೋಜನಚಿತ್ರ.



ಮೆಟ್ಟಿಲ ಪೂಜೆಯಲ್ಲಿ ಭಜನ ಮಂಡಳಿಗಳನ್ನು ಪೇಜಾವರ ಶ್ರೀಪಾದರೂ, ಫಲಿಮಾರು ಭಂಡಾರಕೇರಿ ಕಿರಿಯ ಶ್ರೀಪಾದರಗಳೂ ಮುಂದೆ ನಿಂತು ನಡೆಸಿದರು
ಜೆ ಇ ಓ ಶ್ರೀರಾಮಕೃಷ್ಣಯ್ಯ ಅರಣ್ಯಾಧಿಕಾರಿ ಶ್ರೀ ವೆಂಕಟ್ರಾಮಯ್ಯನವರೂ ಭಾಗವಹಿಸಿದ್ದರು

# ಮೆಟ್ಲೋತ್ಸವದಲ್ಲಿ ಪಾಲುಗೊಂಡ ಭಜನ ಮಂಡಲಿಗಳು

1. ವಿಜಯ ವಿಠಲ ಭಜನ ಮಂಡಲಿ - ಗಂಗಾವತಿ.
2 ರಾಮಚಂದ್ರ ಭಜನ ಮಂಡಲಿ - ಸಿಂಧನೂರು
3 ಪರಿಮಳ ಭಜನ ಮಂಡಲಿ - ಹೊಂಬಳ
4. ಶ್ರೀಮದ್ವೀರರಾಮ ಮಾಧವ ಯತೀಂದ್ರ ಗುರುರಾಜ ಭಜನ ಮಂಡಲಿ - ತಂಬಿಹಳ್ಳಿ,
5 ರಾಘವೇಂದ್ರ ಭಜನ ಮಂಡಲಿ - ಹರಿಹರ
6. ವ್ಯಾಸದಾಸ ಭಜನ ಮಂಡಲಿ - ರಾಯಚೂರು
7 ಕೋದಂಡರಾಮ ಭಜನ ಮಂಡಲಿ - ರಾಯಚೂರು.
8. ಈಶ್ವರ ಭಜನ ಮಂಡಲಿ - ರಾಯಚೂರು
9. ಶ್ರೀರಾಮ ಭಜನ ಮಂಡಲಿ - ಆದೋನಿ.
10. ಭಾರತೀ ಮಹಿಳಾ ಭಜನ ಮಂಡಲಿ - ತಿರುಪತಿ.
11 ಶ್ರೀಶ ಪ್ರಾಣೇಶ ಭಜನ ಮಂಡಲಿ - ಲಿಂಗಸೂಗೂರು
12 ರುಕ್ಮಿಣೀಶ ಭಜನ ಮಂಡಲಿ - ತಿರುಪತಿ.
13 ಶ್ರೀ ಗುರುಸಾರ್ವಭೌಮ ಭಜನ ಮಂಡಲಿ - ಯರಮರಸೆ
14. ಶ್ರೀ ಮಾಧ್ವ ಭಜನ ಮಂಡಲಿ - ಮಂಡ್ಯ
15. ಲಕ್ಷ್ಮೀಶೋಭಾನ ಭಜನ ಮಂಡಲಿ - ಅನಂತಪುರ.
16. ದಾಸಸಾಹಿತ್ಯ ಭಜನ ಮಂಡಲಿ - ಹೈದರಾಬಾದ್
17 ಸುಂದರ ನಗರ ಭಜನ ಮಂಡಲಿ - ಬೆಂಗಳೂರು
18 ಪ್ರಸನ್ನ ವೆಂಕಟದಾಸ ಭಜನ ಮಂಡಲಿ - ಬಾಗಲಕೋಟೆ.
19 ಜಾಹ್ನವಿ ಭಜನ ಮಂಡಲಿ - ಬೆಂಗಳೂರು
20 ಪರಿಮಳ ಮಹಿಳಾ ಭಜನ ಮಂಡಲಿ - ಬಿಜಾಪುರ
21 ಭಾರತೀ ಸೇವಾಸಂಘ - ಬೆಂಗಳೂರು
22. ಶ್ರೀ ಗುರುಜಗನ್ನಾಥದಾಸ ಭಜನ ಮಂಡಲಿ - ಗಜೇಂದ್ರಗಢ
23 ದೇವಗಿರಿ ಲಕ್ಷ್ಮೀಕಾಂತ ಸಂಘ - ಬೆಂಗಳೂರು
24 ವಾಗ್ದೇವಿ ಭಜನ ಮಂಡಲಿ - ಬೆಂಗಳೂರು.
25 ಮಹಾಲಕ್ಷ್ಮೀ ಭಜನ ಮಂಡಲಿ - ಬೆಂಗಳೂರು
26 ಶ್ರೀಭಾರತೀ ಭಜನ ಮಂಡಲಿ - ಕುಕನೂರು
27. ಇಂದ್ರಸೇನ ಭಜನ ಮಂಡಲಿ - ರಾಯಚೂರು
28. ಶ್ರೀ ರಾಘವೇಂದ್ರ ಸೇವಾಸಮಿತಿ - ಮಹಬೂಬ್‌ನಗರ
29. ವಿಜಯವಿಠಲ ಭಜನ ಮಂಡಲಿ - ರಾಯಚೂರು
30 ಪುರಂದರದಾಸ ಸಂಘ - ಚೆನ್ನೈ
31. ಶ್ರೀ ಪ್ರಹ್ಲಾದ ರಾಜ ಭಜನ ಮಂಡಲಿ - ನಾರಾಯಣಪೇಟೆ
32. ಅಂಭೃಣೆ ಮಹಿಳಾ ಭಜನ ಮಂಡಲಿ - ಬೆಂಗಳೂರು
33 ವಿಜಯ ಭಜನ ಮಂಡಲಿ - ಧಾರವಾಡ
34. ಲಕ್ಷ್ಮೀನರಸಿಂಹ ಭಜನ ಮಂಡಲಿ - ಧಾರವಾಡ.
35 ಶ್ರೀರಂಗವಿಠಲ ಮಹಿಳಾ ಭಜನ ಮಂಡಲಿ - ಬೆಂಗಳೂರು
36. ಲಕ್ಷ್ಮೀಶೋಭಾನೆ ಮಹಿಳಾ ಭಜನ ಮಂಡಲಿ - ಹೈದರಾಬಾದ್

(97)

37. ಶ್ರೀರಾಮಚಂದ್ರ ಭಜನ ಮಂಡಲಿ - ಗಂಗಾವತಿ
38 ವಿಜಯವಿಠಲ ಭಜನ ಮಂಡಲಿ - ದಾವಣಗೆರೆ
39 ರುಕ್ಮಿಣೀ ಮಹಿಳಾ ಭಜನ ಮಂಡಲಿ - ಗುಲ್ಬರ್ಗ
40 ಮತ್ತಿಕೆರೆ ಮಾಧ್ವ ಮಹಿಳಾ ಭಜನ ಮಂಡಲಿ - ಬೆಂಗಳೂರು.
41 ಗೋಪಿಕಾ ಭಜನ ಮಂಡಲಿ - ಬಿಜಾಪುರ
42 ಮಧ್ವೇಶ ಕೃಷ್ಣ ಭಜನ ಮಂಡಲಿ - ಬೆಂಗಳೂರು
43. ಪರಿಮಳ ಮಹಿಳಾ ಮಂಡಲಿ - ಬೆಂಗಳೂರು
44 ಚೇತನ ಭಜನ ಮಂಡಲಿ - ಬಾಗಲಕೋಟೆ
45 ಶ್ರೀಕೃಷ್ಣ ತುಲಸೀ ಭಜನ ಮಂಡಲಿ - ಬೆಂಗಳೂರು
46 ಹರೇ ಶ್ರೀನಿವಾಸ ಭಜನ ಮಂಡಲಿ - ನಂದವರಂ
47 ಪರಿಮಳ ಸಾಂಸ್ಕೃತಿಕ ಸಂಸ್ಥೆ ಭಜನ ಮಂಡಲಿ - ಹೈದರಾಬಾದ್
48 ಶ್ರೀಗುರುರಾಜ ಸೇವಾಸಮಿತಿ - ಗೀರಂಕಲಿಗಿ
49 ಪವಮಾನ ಭಜನ ಮಂಡಲಿ - ಮೈಸೂರು
50 ಶ್ರೀನಿವಾಸ ಭಜನ ಮಂಡಲಿ - ಮೈಸೂರು
51 ಲಕ್ಷ್ಮೀನರಸಿಂಹ ಭಜನ ಮಂಡಲಿ - ಮೈಸೂರು
52 ಲಕ್ಷ್ಮೀಶೋಭಾನ ಭಜನ ಮಂಡಲಿ - ಹೈದರಾಬಾದ್

(120)

53 ಅಖಿಲಭಾರತ ಮಾಧ್ವ ಮಹಾಮಂಡಲ ಪ್ರಥಮ ಮಹಿಳಾ ಶಾಖೆ - ಹುಬ್ಬಳ್ಳಿ
54 ದ್ವಾದಶ ಸಂಘ - ಬೆಂಗಳೂರು
55 ಪೂರ್ಣ ಪ್ರಜ್ಞ ಸೇವಾಸಮಿತಿ - ಶಿವಮೊಗ್ಗ
56. ಶ್ರೀ ವಿಜಯ ಭಜನ ಮಂಡಲಿ - ಹುಬ್ಬಳ್ಳಿ
57 ಮಧ್ವ ಸುಪ್ವಾಲಿ ಸಂಘ - ಬೆಂಗಳೂರು
58 ಸತ್ಯಧ್ಯಾನ ಭಜನ ಮಂಡಲಿ - ಮೈಸೂರು
59 ಹರೇ ಶ್ರೀನಿವಾಸ ಭಜನ ಮಂಡಲಿ - ಮೈಸೂರು
60. ಶ್ರೀ ವಾಣಿಸಂಘ - ಬೆಂಗಳೂರು
61 ಸುಮಧ್ವ ಸಂಘ - ಬೆಂಗಳೂರು
62. ಶ್ರೀ ಪುರಂದರ ದಾಸ ಮಹಿಳಾ ಭಜನ ಮಂಡಲಿ - ಥಾನೆ
63 ಗೋಪಾಲಕೃಷ್ಣ ಭಜನ ಮಂಡಲಿ - ಗಂಗಾವತಿ
64 ಮಧ್ವ ಭಜನ ಮಂಡಲಿ - ಭದ್ರಾವತಿ
65 ಶ್ರೀ ರಘುಪ್ರೇಮತೀರ್ಥ ಭಜನಮಂಡಲಿ - ನಾರಾಯಣಪೇಟೆ
66 ಗುರು ಶ್ರೀಶ ಭಜನ ಮಂಡಲಿ - ರಾಯಚೂರು
67 ಮಹಾಲಕ್ಷ್ಮಿ ಭಜನ ಮಂಡಲಿ - ರಾಯಚೂರು
68 ಸುಧಾ ಮಹಿಳಾ ವೃಂದ - ಬೆಂಗಳೂರು
69 ಗುರುರಾಘವೇಂದ್ರ ಭಜನ ಮಂಡಲಿ - ಬೆಂಗಳೂರು
70 ಶ್ರೀ ಸತ್ಯನಾಥ ಭಜನ ಮಂಡಲಿ - ರಾಯಚೂರು
71 ಶ್ರೀ ರಾಘವೇಂದ್ರ ದೇವಾಸಮಿತಿ (ವಿಜಯವಿಠಲ ಮಹಿಳಾಮಂಡಲಿ)-ಬೆಂಗಳೂರು
72 ಶ್ರೀಕೃಷ್ಣ ಮತ್ತು ರಾಘವೇಂದ್ರ ಮಹಿಳಾವೃಂದ - ದಂಗಳೂರು
73 ಶ್ರೀರಾಘವೇಂದ್ರ ಭಜನ ಮಂಡಲಿ - ರಾಯಚೂರು

74. ಶ್ರೀ ಮಹಾ ಲಕ್ಷ್ಮಿ ಮಹಿಳಾ ಸಂಘ - ಬೆಂಗಳೂರು
75 ದೀಪಿಕಾ ಭಜನ ಮಂಡಲಿ - ಬೆಂಗಳೂರು
76 ಹರೇ ಶ್ರೀಕೃಷ್ಣ ಭಜನ ಮಂಡಲಿ - ಮೈಸೂರು.
77. ಶ್ರೀ ವೆಂಕಟೇಶ ಭಜನ ಮಂಡಲಿ - ಇಲಕಲ್.
78. ಶ್ರೀ ರಾಘವೇಂದ್ರ ಸೇವಾ ಸಮಿತಿ - ಮಸ್ಕಿ
79 ಶ್ರೀ ಗುರುದತ್ತ ಭಜನ ಮಂಡಲಿ - ಗುಲ್ಬರ್ಗ
80. ಶ್ರೀ ಮುಂಗಲಿ ಪ್ರಾಣದೇವರ ಭಜನ ಮಂಡಲಿ - ರಾಯಚೂರು.
81. ಶ್ರೀ ಜ್ಞಾನವಾಹಿನಿ ಸಂಘ - ಭದ್ರಾವತಿ.
82. ಶ್ರೀ ಭಗವದ್ಗೀತಾ ಮಹಿಳಾ ಮಂಡಲಿ - ಹುಬ್ಬಳ್ಳಿ
83. ವೈದೇಹೀ ಸತ್ಸಂಗ ಭಜನ ಮಂಡಲಿ - ಅರಸೀಕೆರೆ
84. ಪಾಂಡುರಂಗ ಭಜನ ಮಂಡಲಿ - ಮೈಸೂರು
85. ಶ್ರೀ ಮದಾನಂದ ತೀರ್ಥ ಭಜನ ಮಂಡಲಿ - ಬೆಂಗಳೂರು
86 ಶ್ರೀ ಸುಧಾ ಭಜನ ಮಂಡಲಿ - ನಿಪ್ಪಾಣಿ.
87 ಹರೇ ಶ್ರೀನಿವಾಸ ಭಜನ ಮಂಡಲಿ - ಗಂಗಾವತಿ.
88. ಶ್ರೀನಿಧಿ ಭಜನ ಮಂಡಲಿ - ಬೆಂಗಳೂರು
89 ಸಮೀರ ಮಾಧ್ವ ಭಜನ ಮಂಡಲಿ - ಸಾಗರ
90. ಭಾರತೀ ಭಜನ ಮಂಡಲಿ - ಭದ್ರಾವತಿ
91. ಭಾರತೀ ಭಜನ ಮಂಡಲಿ - ದಾವಣಗೆರೆ
92. ಶ್ರೀ ವಾದಿರಾಜ ಭಜನ ಮಂಡಲಿ - ಕರ್ನೂಲು
93 ಶ್ರೀ ಗುರುರಾಘವೇಂದ್ರ ಭಜನ ಮಂಡಲಿ - ಮುಂಬಯಿ
94. ಅ.ಭಾ.ಮಾ.ಮ. ಮಹಿಳಾಶಾಖೆ - ಜಮಖಂಡಿ.
95. ಪರಿಮಳ ಭಜನ ಮಂಡಲಿ - ಕೊಲ್ಹಾಪುರ.
96. ವೈಷ್ಣವಿ ಭಜನ ಮಂಡಲಿ - ಬೆಂಗಳೂರು.
97. ಶ್ರೀ ಗುರುರಾಜ ಭಜನ ಮಂಡಲಿ - ಷಹಾಪುರ
98 ಪುರಂದರ ದಾಸ ಭಜನ ಮಂಡಲಿ - ನೆಲ್ಲೂರು
99. ಪವಿತ್ರಗಾನ ವೃಂದ - ಬೆಂಗಳೂರು
100 ಪದ್ಮಾವತೀ ಭಜನ ಮಂಡಲಿ - ಬೆಂಗಳೂರು
101. ಮಹಿಳಾ ಹರಿದಾಸ ಸಂಘ - ಹೊಳೆನರಸೀಪುರ.
102. ವಾಣಿ ಮಹಿಳಾ ಮಂಡಲಿ - ಹಾವೇರಿ.
103 ಗುರುರಾಜ ಭಜನ ಮಂಡಲಿ - ಯಾದಗಿರಿ
104 ಭಾರತೀಶ ಭಜನ ಮಂಡಲಿ - ಬೆಂಗಳೂರು.
105 ಶ್ರೀ ಮಹಾಲಕ್ಷ್ಮಿ ಭಜನ ಮಂಡಲಿ - ಕೊಲ್ಹಾಪುರ.
106. ಶ್ರೀ ಗುರುರಾಜ ಭಜನ ಮಂಡಲಿ - ಹುನಗುಂದ
107 ಶ್ರೀ ಗುರು ಸಾರ್ವಭೌಮ ಭಜನ ಮಂಡಲಿ - ಮುಂಬಯಿ.
108 ಶ್ರೀ ಪರಿಮಳ ರಾಘವೇಂದ್ರ ಭಜನ ಮಂಡಲಿ - ಬೆಂಗಳೂರು.
109. ಪರಿಮಳ ಭಜನ ಮಂಡಲಿ - ಹುಬ್ಬಳ್ಳಿ
110. ಶ್ರೀ ರಘುಪ್ರೇಮ ಭಜನ ಮಂಡಲಿ - ಆದೋನಿ
111. ಚಂದ್ರಿಕಾ ಭಜನ ಮಂಡಲಿ - ಬೆಂಗಳೂರು.
112. ಶ್ರೀದೇವಿ ಭಜನ ಮಂಡಲಿ - ಬೆಂಗಳೂರು
113 ನಂದಕಿಶೋರ ಭಜನ ಮಂಡಲಿ - ದಾವಣಗೆರೆ
114. ಶಿವಕನ್ಯಾ ಬಾಲಿಕಾ ವೃಂದ - ದಾವಣಗೆರೆ.
115 ಅ ಭಾ.ಮಾ ಮ ಮಹಿಳಾಶಾಖೆ - ಬೆಂಗಳೂರು
116 ಶ್ರೀ ರಾಘವೇಂದ್ರ ಭಜನ ಮಂಡಲಿ - ಚಿಂತಾಮಣಿ
117. ಶ್ರೀಭಾರತೀ ರಮಣ ಭಜನ ಮಂಡಲಿ - ನೆಲಮಂಗಲ.
118. ಶ್ರೀ ಬಾಲಾಜೀ ಭಜನ ಮಂಡಲಿ - ಗಂಗಾವತಿ.
119. ಶ್ರೀಪಾದರಾಜ ಮಹಿಳಾ ಮಂಡಲಿ - ಚಿತ್ತೂರು.
120 ಶ್ರೀ ಸತ್ಯನಾರಾಯಣ ಭಜನ ಮಂಡಲಿ - ಆದೋನಿ
121. ಶ್ರೀ ವ್ಯಾಸರಾಜ ಭಜನ ಮಂಡಲಿ - ಸೂಳೂರುಪೇಟೆ.
122. ಶ್ರೀ ಮಹಾಲಕ್ಷ್ಮಿ ಭಜನ ಮಂಡಲಿ - ನೆಲ್ಲೂರು
123. ಶ್ರೀಶವಿರಲ ಭಜನ ಮಂಡಲಿ - ಬೆಂಗಳೂರು.
124. ಶ್ರೀಕೃಷ್ಣ ಭಜನ ಮಂಡಲಿ - ಶಿವಮೊಗ್ಗ
125. ವಾಯುಜೀವೋತ್ತಮ ಭಜನ ಮಂಡಲಿ - ಬೆಂಗಳೂರು
126. ಸುಕೃತ ಮಹಿಳಾ ಸಮಾಜ - ಬೆಂಗಳೂರು
127. ಚಂದ್ರಿಕಾ ಭಜನಮಂಡಲಿ(ಬನಶಂಕರಿ)-ಬೆಂಗಳೂರು
128. ಚಂದ್ರಿಕಾ ಭಜನ ಮಂಡಲಿ - ಬೆಂಗಳೂರು
129 ಶ್ರೀರಾಮ ಸೇವಾ ಸಮಿತಿ - ಲಿಂಗದ ಹಳ್ಳಿ
130 ಅಲಕನಂದ ಮಹಿಳಾ ಸಮಾಜ - ಬೆಂಗಳೂರು.
131 ಶ್ರೀ ವೇದವ್ಯಾಸ ಭಜನ ಮಂಡಲಿ - ಬೆಂಗಳೂರು
132. ಪರಿಮಳ ಭಜನ ಮಂಡಲಿ - ಬೆಂಗಳೂರು.
133. ಶ್ರೀ ಭೀಮೇಶ ಕೃಷ್ಣ ಭಜನ ಮಂಡಲಿ - ಬೆಂಗಳೂರು
134 ಉದ್ಗೀತ ಭಜನ ವೃಂದ - ಭದ್ರಾವತಿ
135 ರುಕ್ಮಿಣಿ ಬಳಗ - ಬೆಂಗಳೂರು
136 ಶ್ರೀ ಸೀತಾರಾಮ ಭಜನ ಮಂಡಲಿ - ಬೆಂಗಳೂರು
137 ಶ್ರೀ ರಾಘವೇಂದ್ರ ಭಜನ ಮಂಡಲಿ - ರಾಜಮಂಡ್ರಿ.
138. ಶ್ರೀ ಸತ್ಯ ವಿಜಯದಾಸ ಭಜನ ಮಂಡಲಿ - ಗುಂಟೂರು.
139. ಶ್ರೀ ಪುರಂದರದಾಸ ಭಜನ ಮಂಡಲಿ - ಗುಂಟೂರು
140 ಶ್ರೀ ರುಕ್ಮಿಣೀ ಮಹಿಳಾ ಸಂಘ - ಬೆಂಗಳೂರು
141 ಹಯವದನ ಭಜನ ಮಂಡಲಿ - ಶ್ರೀರಂಗಂ
142 ಶ್ರೀ ಪರಿಮಳ ಭಜನ ಮಂಡಲಿ - ಬಳ್ಳಾರಿ
143. ಮಾಗೇರಿಪ್ರಸನ್ನ ಶ್ರೀನಿವಾಸಭಜನಮಂಡಲಿ-ಬೆಂಗಳೂರು
144 ಬಾಲಾಜಿ ಭಜನ ಮಂಡಲಿ - ಪೆನ್ನಗಿರಿ
145. ಶ್ರೀರಾಮಾಂಜನೇಯ ಭಜನ ಮಂಡಲಿ - ಭದ್ರಾವತಿ
146 ಶ್ರೀ ಹರಿಪ್ರಿಯ ಭಜನ ಮಂಡಲಿ - ತುಮಕೂರು
147 ಪ್ರೇರಣ ಭಜನ ಮಂಡಲಿ - ಬೆಂಗಳೂರು
148 ಅ.ಭಾ ಮಾ ಮ ಮಹಿಳಾಶಾಖೆ - ಹೈದರಾಬಾದ್
149. ಗುರುರಾಜ ಭಜನ ಮಂಡಲಿ - ಹೈದರಾಬಾದ್
150 ಮಾಧ್ವ ಯುವಕ ಸಂಘ - ದಾವಣಗೆರೆ
151. ವ್ಯಾಸ ದಾಸ ಭಜನ ಮಂಡಲಿ - ಹೈದರಾಬಾದ್
152 ಆದ್ಯಕೃಷ್ಣದ್ವೈಪಾಯನಾಚಾರ್ಯಭಜನ ಮಂಡಲಿ - ಮಣೂರು
153 ಶ್ರೀ ವೆಂಕಟೇಶ್ವರ ಭಜನ ಮಂಡಲಿ - ಗುಲ್ಬರ್ಗ.
154 ಪವನ ಭಜನ ಮಂಡಲಿ - ಮಾನ್ವಿ.

* * *

# ಸಂಕಣ್ಣನಾಯಕ

ಆದ್ಯರಾಮಾಚಾರ್ಯ

ನಮ್ಮ ನಾಡು ಎಪ್ಪತ್ತೆರಡು ಸಾವಿರ ಚದುರ ಮೈಲು ವಿಸ್ತಾರವುಳ್ಳದ್ದು ನಡುದ್ವೈತಲೆಯಂತೆ ಈ ನಾಡಿನಲ್ಲಿ ತುಂಗಭದ್ರೆ ಹರಿಯುತ್ತಾಳೆ. ವಿಜಯನಗರದ ಸಾಮಂತ ರಾಜ್ಯವಾಗಿ ಕೆಳದಿಯ ರಾಜ್ಯವು ಬೆಳೆಯಿತು ಕ್ರಿ.ಶ ೧೫೧೧ ರಿಂದ ೧೭೬೩ ರ ವರೆಗೆ ಚಿಕ್ಕಮಂಗಳೂರು, ಮಂಗಳೂರು, ಹಾಸನ, ಕಾರವಾರದ ಕೆಲವು ಭಾಗಗಳು ಈ ರಾಜ್ಯಕ್ಕೆ ಸೇರಿಕೊಂಡಿದ್ದವು. ಬಸಪ್ಪ ನಾಯಕ, ಚೌಡಪ್ಪ ನಾಯಕ ಕ್ರಿ ಶ ೧೫೦೦ ರಿಂದ ೧೫೧೪, ಸದಾಶಿವ ನಾಯಕ ೧೫೧೪ ರಿಂದ ೧೫೪೬, ಸಂಕಣ್ಣ ನಾಯಕ ೧೫೧೪ ರಿಂದ ೧೫೪೬. ಈ ರಾಜ್ಯದ ಇತಿಹಾಸವನ್ನು ತಿಳಿಸಿ ಹೇಳುವುದರಲ್ಲಿ ಲಿಂಗಣ್ಣ ಕವಿಯ ಪಾತ್ರ ಬಹು ಮಹತ್ವದ್ದು. ಆತನು ಇ ಸ ೧೭೬೩ ರಲ್ಲಿ ಬಹು ಸೊಗಸಾದ ಕೆಳದಿಯ ನೃಪವಿಜಯ ಎಂಬ ಕಾವ್ಯವನ್ನಿತ್ತು ನಮಗೆ ಉಪಕಾರ ಮಾಡಿದ್ದಾನೆ

ಇ.ಸ ೧೫೪೬ ರಲ್ಲಿ ಸಂಕಣ್ಣ ನಾಯಕನು ಪಟ್ಟಕ್ಕೆ ಬಂದನು ವಿಜಯನಗರದವರ ಪರವಾಗಿ ಅವನು ಸಾಕಷ್ಟು ಯುದ್ಧಗಳಲ್ಲಿ ಭಾಗವಹಿಸಿದ ಅದಾವ ಕಾರಣದಿಂದಲೋ ಮುಂದೆ ಆತನಿಗೆ ಭಾರತ ತೀರ್ಥಯಾತ್ರೆಗಳ ಸಂದರ್ಶನದ ಅಭಿಲಾಷೆ ಮೂಡಿತು ತನ್ನ ಅಂತರಂಗದ ಆತ್ಮೀಯರೊಂದಿಗೆ ಪ್ರವಾಸವನ್ನಾರಂಭಿಸಿದ ಆತನ ಪ್ರವಾಸದ ಕಥನವೇ ಲಿಂಗಣ್ಣ ಕವಿಯ ಕೆಳದಿಯ ನೃಪವಿಜಯ ಎಂಬ ಕಾವ್ಯ ರೂಪದಲ್ಲಿ ಹೊರಹೊಮ್ಮಿಬಂದಿತು

ಪ್ರವಾಸವನ್ನಾರಂಭಿಸುವ ಮುನ್ನ ತನ್ನ ತಮ್ಮನ ಮಕ್ಕಳಾಗಿದ್ದ ಚಿಕ್ಕ ಸಂಕಣ್ಣ ಹಾಗೂ ವೆಂಕಟಪ್ಪ ನಾಯಕರಿಗೆ ರಾಜ್ಯಭಾರವನ್ನು ಒಪ್ಪಿಸಿದ ಸ್ವತಃ ವೀರಶೈವ ಸಂಪ್ರದಾಯವಾದಿಯಾದ ಆತನು ಜಂಗಮ ವೇಷದಿಂದಲೇ ತನ್ನ ಪ್ರವಾಸವನ್ನಾರಂಭಿಸಿದ ಮೊದಲು ದಕ್ಷಿಣ ಭಾರತದ ಕಂಚಿ, ಚಿದಂಬರಂ, ರಾಮೇಶ್ವರ ಮೊದಲಾದ ಪುಣ್ಯಕ್ಷೇತ್ರಗಳ ದರ್ಶನ ಮಾಡಿಕೊಂಡು ವಿಜಾಪುರ ಹಾಗೂ ಗೋವಳಕೊಂಡ ರಾಜ್ಯಗಳ ಮಾರ್ಗವಾಗಿ ಉತ್ತರ ಭಾರತದತ್ತ ಆತನ ಪ್ರಯಾಣವು ಆರಂಭವಾಯಿತು

ಕೆಳದಿಯ ನೃಪವಿಜಯದಲ್ಲಿ ಲಿಂಗಣ್ಣ ಕವಿಯು ದಿಲ್ಲಿಯ ವಿಚಾರವನ್ನು ಉಲ್ಲೇಖಿಸಿದ್ದಾನೆ ಆದರೆ *ಅದು ಸರಿಯಲ್ಲವೆಂದು ನನ್ನ ಗುರುಗಳಾಗಿದ್ದ ಡಾ|| ಸೇತುಮಾಧವರಾವ್ ಪಗಡಿಯವರು ನಿರ್ಧರಿಸಿ ದಿಲ್ಲಿಯ ಬದಲಾಗಿ ಸಾಕ್ಷಿಸಮೇತವಾಗಿ ಅವರು ಅಹಮ್ಮದನಗರವನ್ನು ಸೂಚಿಸಿದ್ದಾರೆ ಅಹಮ್ಮದನಗರದಲ್ಲಿ ಖುರ್ಹಾಣ ನಿಜಾಮ ಶಹನು ರಾಜ್ಯವಾಳುತ್ತಲಿದ್ದ ಆತನಿಗೆ ದ್ವಂದ್ವಯುದ್ಧದಲ್ಲಿ ಹೆಚ್ಚಿನ ಅಭಿರುಚಿ ಇತ್ತು ಸಂಕಣ್ಣ ನಾಯಕನು ಅಹಮ್ಮದನಗರದ ಕೋಟೆಯನ್ನು ಪ್ರವೇಶ ಮಾಡುವಾಗ ಹೆಬ್ಬಾಗಿಲಿನಲ್ಲಿ ಒಂದು ಖಡ್ಗವನ್ನು ತೂಗು ಬಿಡಲಾಗಿದ್ದು, ಆ ಖಡ್ಗದ ಮೇಲೆ ಉರ್ದುವಿನಲ್ಲಿದ್ದ ಲೇಖನವನ್ನು ಕುರಿತು ಸಂಕಣ್ಣನು ಕೊತವಾಲನನ್ನು ವಿಚಾರಿಸಿದ

"ಈ ರಾಜ್ಯದ ಮಹಾಮಂತ್ರಿ ಅಂಕುಶ ಖಾನನು ಯಾರಾದರೂ ದ್ವಂದ್ವ ಯುದ್ಧದಲ್ಲಿ ನನ್ನೊಂದಿಗೆ ಹೋರಾಡಲು ಸಿದ್ಧರಿದ್ದಲ್ಲಿ ಈ ಖಡ್ಗವನ್ನು ಕೆಳಗಿಳಿಸಿ, ನನ್ನೊಂದಿಗೆ ಹೋರಾಡಲು ಸಿದ್ಧರಾಗಬಹುದು ಅಂಥವರ ಗಂಡಸತನಕ್ಕೆ ಇದು ಆಹ್ವಾನವಾಗಿದೆ" ಎಂಬುದಾಗಿ ತಿಳಿಸಿದರು ಆಗ ಸಂಕಣ್ಣ ನಾಯಕನು ನಕ್ಕು, "ಮೊದಲು ಆ ಖಡ್ಗವನ್ನು ಕೆಳಗಿಳಿಸಿರಿ ಅಂಕುಶ ಖಾನನೊಂದಿಗೆ ಹೋರಾಡಲು ನಾವು ಸಿದ್ಧರಿರುವುದಾಗಿ ಹೇಳಿರಿ ಮೊದಲು ಬಾದಶಹ ಖುರ್ಹಾಣ ನಿಜಾಮ ಶಹರಿಗೆ ಈ ಮಾತನ್ನು ಹೇಳಿ ಕಳುಹಿಸಿರಿ "

"ಮಹಾಸ್ವಾಮಿ, ತಾವು ಯಾರು ? ತಮಗೇಕೆ ಈ ಸಾಹಸದ ಮಾತು ? ಅಂಕುಶಖಾನರು ಸಾಮಾನ್ಯರಲ್ಲ ಪ್ರಾಣದ ಮೇಲೆ ಆಶೆ ಇದ್ದಲ್ಲಿ ಈ ಸಾಹಸಕ್ಕೆ ಕೈಹಾಕದೇಡಿರಿ" ಎಂದು ಕೊತವಾಲ ಬಿನ್ನವಿಸಿದನು

"ನಾವು ಯಾರಾದರೇನಂತೆ, ನಿಮ್ಮ ಅಂಕುಶ ಖಾನರೊಡ್ಡಿದ ಶರತ್ತುಗಳಿಗೆ ಸಿದ್ಧರಾಗಿಯೇ ಬಂದಿದ್ದೇವೆ ಭಯಪಡದೇಡಿರಿ ಮೊದಲು ನಿಮ್ಮ ಬಾದಶಹರಿಗೆ ನಮ್ಮ ಈ ವಿಚಾರವನ್ನು ತಿಳಿಸಿರಿ" ಎಂದು ಹೇಳಿಕಳುಹಿಸಿದನು

ಬಾದಶಹನ ಸಮ್ಮುಖದಲ್ಲಿ ಆತನನ್ನು ಕರೆತಂದು ನಿಲ್ಲಿಸಿದಾಗ ಆತನ ಮುಖದಲ್ಲಿರುವ ತೇಜಸ್ಸು, ವಾಕ್ಚಟುತ್ವ, ನಿರ್ಭಯದ ನೋಟಗಳನ್ನು ಕಂಡು ಬಾದಶಹನಿಗೆ ಬಹು ಆಶ್ಚರ್ಯವಾಯಿತು ಬಹುದಿನಗಳಿಂದ ಕೊಬ್ಬಿದ್ದ ಅಂಕುಶ ಖಾನನ್ನು ಎದುರಿಸುವ ಭೂಪನನ್ನು ಕಂಡು ಆತನು ಮನದಲ್ಲಿಯೇ ಸಂತೋಷಪಟ್ಟನು ತಕ್ಷಣವೇ ದ್ವಂದ್ವ ಯುದ್ಧದ ಸಿದ್ಧತೆಗೆ ಆಜ್ಞೆ ಮಾಡಿದ ಅಷ್ಟೇ ಅಲ್ಲದೇ ಅತಿಥಿಗಳ ಬಿಡಾರ ಹಾಗೂ ಊಟೋಪಚಾರಗಳಿಗೆಲ್ಲ ಸರಿಯಾದ ವ್ಯವಸ್ಥೆಯಾಗುವಂತೆ ಸೇವಕರಿಗೆ ಸೂಚನೆ ಮಾಡಿದ

ದಿನನಿತ್ಯದ ಪೂಜಾವಿಧಾನಗಳನ್ನು ಮುಗಿಸಿ ಹಣೆಯಲ್ಲಿ ಶ್ರೀಗಂಧ ಲೇಪಿತನಾದ ಸಂಕಣ್ಣನಾಯಕನು ದರ್ಬಾರಿನಲ್ಲಿ ಹಾಜರಾದಾಗ ವಜೀರ ಅಂಕುಶ ಖಾನನು 'ನೀನಾರೆಂಬುದು ನಮಗೆ ತಿಳಿಯದು ವ್ಯಥಾ ಪ್ರಾಣ ಕಳೆದುಕೊಳ್ಳದೇಡ ವಿನಮ್ರವಾಗಿ ನಡೆದುಕೊಂಡಲ್ಲಿ ಬಾದಶಹರಿಂದ ಬಹುಮಾನ ಕೊಡಿಸುವುದಾಗಿ' ಸಂಕಣ್ಣ ನಾಯಕನಿಗೆ ಹೇಳಿದ ಸಂಕಣ್ಣನು ಮಾತ್ರ ಆತನಿಗೆ ದ್ವಂದ್ವ ಯುದ್ಧಕ್ಕೆ ಸಿದ್ಧನಾಗುವಂತೆ ಉತ್ತರಿಸಿದ

ಪ್ರಜೆಗಳು ಆ ದ್ವಂದ್ವ ಯುದ್ಧವನ್ನು ವೀಕ್ಷಿಸಲು ತಂಡೋಪತಂಡವಾಗಿ ಬಂದು ಸೇರಿದರು ಸಂಕಣ್ಣನ ಕೈಯಲ್ಲಿ ಆಯುಧವಿಲ್ಲದುದನ್ನು ಕಂಡ ಖುರ್ಹಾಣ ನಿಜಾಮ ಶಹನು ಆತನಿಗೆ ತೀಕ್ಷ್ಣವಾದ ಖಡ್ಗವನ್ನು ಒಪ್ಪಿಸುವಂತೆ ಹೇಳಿದನು ಕೊಟ್ಟ ಖಡ್ಗವು ಎರಡು ಸಲ ತಿರುಗಿಸುವುದಲ್ಲಿಯೇ ತುಂಡಾಗಿ ಹೋಯಿತು. ಹೀಗೆ ಒಂದಲ್ಲ, ಎರಡಲ್ಲ



ಹನ್ನೆರಡು ಖಡ್ಗಗಳು ತುಂಡಾಗಿ ಬಿದ್ದಾಗ ಬಾದಶಹನು ತನ್ನ ಸ್ವಂತದ ಖಡ್ಗವನ್ನೇ ಕೊಡಲು ಮುಂದಾದುದನ್ನು ಕಂಡ ಸಂಕಣ್ಣ ನಾಯಕನು "ಬೇಡ, ನಿಮ್ಮ ಆ ಖಡ್ಗವನ್ನು ನಾನು ಬಳಸಲಾರೆ ಅದು ಎಷ್ಟಾದರೂ ರಾಜಖಡ್ಗವೆನಿಸುತ್ತದೆ ಅದರ ಮರ್ಯಾದೆ ಅದಕ್ಕಿದ್ದೇ ಇದೆ" ಎಂದು ಹೇಳಿ ತಾನು ಸಂಗಡ ತೆಗೆದುಕೊಂಡು ಬಂದಿದ್ದ "ನಾಗಮುರಿ" ಖಡ್ಗವನ್ನು ಹೊರತೆಗೆದನು

ಈ ದ್ವಂದ್ವ ಯುದ್ಧವನ್ನು ಲಿಂಗಣ್ಣ ಕವಿ ಹೇಗೆ ವರ್ಣಿಸಿರುವನೆಂದು ಹೇಳುವುದಕ್ಕಿಂತ ಆ ಗ್ರಂಥದ ಅಭ್ಯಾಸ ಮಾಡುವುದೇ ವಿಹಿತ ಆದರೂ ಸ್ವಲ್ಪದರಲ್ಲಿ ಆತನ ವರ್ಣನೆಯನ್ನಿಲ್ಲಿ ಒದಗಿಸಲಾಗಿರುವುದು

"ಕ್ರೋಧಾನ್ವಿತ ವರಾಹಗಳಂತೆ, ಕಡುಕೋಪಗೊಂಡು ಬುಸುಗುಟ್ಟುವ ಸರ್ಪಗಳಂತೆ, ಕೋಪೋದ್ರಿಕ್ತ ಸಿಂಹಗಳಂತೆ, ಮದವೇರಿದ ಆನೆಗಳಂತೆ, ಅವರಿಬ್ಬರ ಖಡ್ಗಗಳ ಖಣಾಖಣಿತ ಶಬ್ದಗಳು ಸಿಡಿಲಿನಂತೆ ಕೇಳಿಬರುತ್ತಿದ್ದವು ಖಡ್ಗಗಳ ತಾಕಲಾಟದಿಂದ ಹಾರಿದ ಕಿಡಿಗಳು ಮಿಂಚಿನಂತೆ ಕಂಗೊಳಿಸುತ್ತಿದ್ದವು ಹೀಗೆ ದಿನವೆಲ್ಲ ಹೋರಾಟವು ಸಾಗುತ್ತ ಕೊನೆಗೆ ಖಡ್ಗ ತ್ಯಜಿಸಿ ಮಲ್ಲಯುದ್ಧಕ್ಕಿಳಿದಾಗಲೂ ಸಹ ಅದರಲ್ಲಿ ಯಾರೂ ಗೆದೆಯುವ ಲಕ್ಷಣಗಳು ಕಾಣಲಿಲ್ಲ ಅದರಿಂದಾಗಿ ಪುನಃ ಖಡ್ಗಯುದ್ಧವನ್ನು ಆರಂಭಿಸಿದರು ಒಂದು ಸಲ ಅಂಕುಶಖಾನನು ತನ್ನೆಲ್ಲ ಶಕ್ತಿಯನ್ನು ಬಳಸಿ ನಾಯಕನ ಮೇಲೆ ಪ್ರಹಾರ ಮಾಡಲು ಯತ್ನಿಸಿದನು ಆಗ ಚಾಣಾಕ್ಷನಾದ ಸಂಕಣ್ಣನು ಆ ಹೊಡೆತದಿಂದ ಪಾರಾದನಲ್ಲದೆ ತನ್ನ ನಾಗಮುರಿ ಖಡ್ಗದಿಂದ ಖಾನನ ದೇಹದ ಮೇಲೆ ಪ್ರಹಾರ ಮಾಡಿದನು ಯುದ್ಧವನ್ನು ನಿಲ್ಲಿಸಿದನು ಅದನ್ನು ಕಂಡ ಖುರ್ಹಾಣ ನಿಜಾಮ ಶಹನು-

"ಯಾಕೆ ಮಧ್ಯದಲ್ಲಿಯೇ ನಿಲ್ಲಿಸಿದಿರಲ್ಲ, ಕಾರಣವೇನು" ಎಂದು ಪ್ರಶ್ನೆ ಮಾಡಿದಾಗ ಸಂಕಣ್ಣನು "ಮೃತದೇಹದೊಂದಿಗೆ ಯಾರಾದರೂ ಯುದ್ಧ ಮಾಡುತ್ತಾರೆಯೇ" ಎಂದು ಹೇಳಿದಾಗ ಬಾದಶಹನಿಗೆ ಆತನ ಮಾತಿನಲ್ಲಿ ನಂಬಿಕೆಯು ಬರಲಿಲ್ಲ ಅಂಕುಶ ಖಾನನು ನಿಂತಲ್ಲಿಯೇ ನಿಂತಿರುವುದೇ ಆತನ ಈ ಸಂಶಯಕ್ಕೆ ಕಾರಣವಾಗಿತ್ತು ಆಗ ಸಂಕಣ್ಣನಾಯಕನು ನಾಗಮುರಿ ಖಡ್ಗದಿಂದ ಆತನ ಎದೆಗೆ ತಿವಿದಾಗ ಕಡಿದ ಮರದಂತೆ ಖಾನನು ನೆಲಕ್ಕುರುಳಿದನು ಅದನ್ನು ಕಂಡ ಬಾದಶಹನು ತಬ್ಬಿಬ್ಬಾಗಿ ಹೋದನು ತಕ್ಷಣವೇ ಯುದ್ಧ ಭೂಮಿಯಿಂದ ಸನ್ಮಾನಪೂರ್ವಕ ಆತನನ್ನು ಕರೆಸಿಕೊಂಡು ಆದರದಿಂದ "ನೀವು ಯಾರು? ಇಲ್ಲಿಗೇಕೆ ಬಂದಿರಿ?" ಎಂದೆಲ್ಲ ವಿಚಾರಮಾಡಿದಾಗ ಸಂಕಣ್ಣನಾಯಕನು ಕನ್ನಡ ನಾಡಿನ ಕೆಳದಿಯ ದೊರೆಯಾದ ತಾನು ತೀರ್ಥಯಾತ್ರೆಗೆ ಹೊರಟಿರುವ ಸಮಾಚಾರವನ್ನು ತಿಳಿಸಿದನು ಸಂತೋಷಭರಿತನಾದ ಬಾದಶಹನು ಕನ್ನಡ ನಾಡಿನ ರಾಜಮನೆತನದ ವೀರಾಧಿವೀರನನ್ನು ಸತ್ಕರಿಸುವಂತೆ ಅಪ್ಪಣೆ ಮಾಡಿದಾಗ, ಸಂಕಣ್ಣ ನಾಯಕನು "ನಾನು ಕುರುಕ್ಷೇತ್ರ, ಗಯಾ, ಪ್ರಯಾಗಗಳಿಗೆ ಹೋಗಿ, ಕಾಶೀ ಕ್ಷೇತ್ರದಲ್ಲಿ ಮಠವನ್ನು ನಿರ್ಮಿಸುವ ವಿಚಾರ ಮಾಡಿದ್ದೇನೆ" ಎಂದು ಹೇಳಿದಾಗ ಖುರ್ಹಾಣ ನಿಜಾಮ ಶಹನು ಸಂಕಣ್ಣನಿಗೆ ಧರ್ಮಕಾರ್ಯಕ್ಕಾಗಿ ಹನ್ನೆರಡು ಸಾವಿರ ಹೊನ್ನುಗಳನ್ನಿತ್ತನಲ್ಲದೆ, ಆತನ ಸಂಗಡ ಮೈಗಾವಲಿನ ಸೇವಕರನ್ನು ಕಳಿಸಿಕೊಟ್ಟನು

ಸಂಕಣ್ಣನು ಕಾಶೀಕ್ಷೇತ್ರದಲ್ಲಿ ದಿವ್ಯವಾದ ಮಠವನ್ನು ಕಟ್ಟಿಸಿದನಲ್ಲದೆ, ಅದಕ್ಕೆ ಅನೇಕ ರೀತಿಯ ಉಂಬಳಿಯ ವ್ಯವಸ್ಥೆ ಮಾಡಿದನು (ಇಂದಿಗೂ ಕಾಶಿಯಲ್ಲಿ ಆ ಮಠವನ್ನು ನಾವು ನೋಡಬಹುದು ಅದನ್ನು ವೀರಶೈವರು ಕಾಶೀಪೀಠವೆಂದು ಗೌರವಿಸುವುದುಂಟು) ಕಾಶಿಯಲ್ಲಿ ಮನಸೋಕ್ತ ದಾನ ಧರ್ಮಾದಿಗಳನ್ನು ಮಾಡಿ ದಕ್ಷಿಣದ ಕಾಶಿ ಎಂದೆನಿಸಿಕೊಂಡಿದ್ದ ದೊಡ್ಡ ವಿದ್ಯಾಪೀಠವಾಗಿದ್ದ ಗೋದಾವರಿ ತೀರದ ಪೈಠಣಕ್ಕೆ ಬಂದು ತಲುಪಿದನು ಆಗ, ಒಂದು ದಿನ ನಸುಕಿನ ಜಾವದಲ್ಲಿ ಮೂವತ್ತೆರಡು ಭುಜಗಳಿಂದ ಕೂಡಿದ ಅಘೋರೇಶ್ವರ ಸ್ವಾಮಿಯ ದರ್ಶನವಾಗಿ ತಾನು ಕೆರೆಯ ದಡದಲ್ಲಿರುವುದಾಗಿ ಸೂಚಿಸಿ ತನ್ನನ್ನು ಕರೆದುಕೊಂಡು ಹೋಗಿ ನಿನ್ನ ರಾಜ್ಯದಲ್ಲಿ ಪ್ರತಿಷ್ಠಾಪನೆ ಮಾಡೆಂದು ಸೂಚನೆಯಾಯಿತು ಮರುದಿನ ಸ್ವಪ್ನ ಸೂಚಿತ ಸ್ಥಳಕ್ಕೆ ಹೋದಾಗ ಸ್ವಾಮಿಯನ್ನು ಕಂಡು ಹರ್ಷಭರಿತನಾದ ಸಂಕಣ್ಣ ನಾಯಕನು ಆ ದೇವನನ್ನು ಕರೆತಂದು ಇಕ್ಕೇರಿಯಲ್ಲಿ ಬಹು ದೊಡ್ಡ ದೇವಾಲಯ ಕಟ್ಟಿಸಿ ಅಲ್ಲಿಯೇ ಆ ದೇವನನ್ನು ಪ್ರತಿಷ್ಠಾಪನೆ ಮಾಡಿಸಿದನು ಕಾಲಾಂತರದಲ್ಲಿ ಮಹಮ್ಮದೀಯರ ದಾಳಿಯ ಕಾಲದಲ್ಲಿ ಆ ವಿಗ್ರಹವು ಭಿನ್ನವಾಗಿ ಹೋಯಿತು ಮುಂದೆ ಆ ದೇವಾಲಯದಲ್ಲಿ ಈಶ್ವರನ ಲಿಂಗವನ್ನು ಪ್ರತಿಷ್ಠಾಪಿಸಲಾಯಿತು ಕೆಳದಿಯ ರಾಜಮನೆತನದವರಿಗೆಲ್ಲ ಅಘೋರೇಶ್ವರಸ್ವಾಮಿಯೇ ತಮ್ಮ ಕುಲದೇವತೆಯೆಂದು ಆರಾಧಿಸುತ್ತ ಬಂದರು ಈ ಮನೆತನದವರು ಇನ್ನೂರಾ ಐವತ್ತು ವರುಷಗಳವರೆಗೆ ಬಹು ವೈಭವದಿಂದ ರಾಜ್ಯವಾಳಿದರು ಮಹಾ ಧರ್ಮರಾಜ್ಯವೆಂದೆನಿಸಿಕೊಳ್ಳುವಂತೆ ನೋಡಿಕೊಂಡರು

ಇ ಸ ೧೬೩೦ ರ ನಂತರ ಈ ಭಾಗವೆಲ್ಲ ರಣದುಲ್ಲಾಖಾನ ಹಾಗೂ ಛತ್ರಪತಿ ಶಿವಾಜಿಯ ತಂದೆಯಾದ ಶಹಾಜೀ ರಾಜನ ವಶಕ್ಕೆ ಹೋಯಿತು ಆಗ ಈ ಮನೆತನದವರು ತಮ್ಮ ರಾಜಧಾನಿಯನ್ನು ವೇಣುಪುರ ಅಥವಾ ಬಿದನೂರು ಎಂಬಲ್ಲಿ ಬದಲಿಸಿಕೊಂಡರು (ಇತ್ತೀಚೆಗೆ ಮಹಾರಾಷ್ಟ್ರ ವಿಶ್ವವಿದ್ಯಾಲಯದ ಡಾ || ಮೋರ ಕಂಜೀಕರ್ ಎಂಬ ಸಂಶೋಧಕರು ಉತ್ಖನನ ಕಾಲದಲ್ಲಿ ಅಘೋರೇಶ್ವರ ವಿಗ್ರಹವು ದೊರಕಿದ್ದು, ಅದನ್ನು ವಸ್ತು ಸಂಗ್ರಹಾಲಯದಲ್ಲಿ ಇಡಲಾಗಿದೆ ಎಂದು ಹೇಳಿಕೊಂಡಿರುವರು)

ಲಿಂಗಣ್ಣ ಕವಿಯ ಈ ಕಾವ್ಯವು ಕರ್ನಾಟಕದ ವೀರಶ್ರೀಯನ್ನು ಎತ್ತಿ ತೋರಿಸುವಂತಹ ಕೆಚ್ಚೆದೆಯ ಕಾವ್ಯವೆನಿಸುವುದು ಈ ಕಾವ್ಯದಿಂದ ಕಣ್ಮರೆಯಾದ ಅಘೋರೇಶ್ವರ ದೇವನೊಂದಿಗೆ ವೀರ ಪ್ರತಾಪಿಯಾದ ಸಂಕಣ್ಣ ನಾಯಕನ ದರ್ಶನವಾದಂತಹ ಅನುಭವವಾಗುವುದರಲ್ಲಿ ಸಂದೇಹವಿಲ್ಲ.

(ಕೆಳದಿಯ ನೃಪ ವಿಜಯವನ್ನು ಖ್ಯಾತಪತ್ರಕರ್ತ ತಿ ತಾ ಶರ್ಮರು ಸಂಪಾದಿಸಿ ಪ್ರಕಟಿಸಿರುವರು)

# ಹೇ! ದೇವಾ!

ಮೃಗ ಪಕ್ಷಿ ಕ್ರಿಮಿ ಕೀಟ ಜನುಮಗಳ ದಾಟಿಸಿಹೆ
ಎಲ್ಲಕ್ಕು ಮಿಗಿಲಾದ ನರಜನುಮ ಕರುಣಿಸಿಹೆ
ಎಲ್ಲ ವಿಷಯಗಳರಿವ ಜ್ಞಾನವನು ಕರುಣಿಸಿಹೆ
ಇನ್ನೇನು ಬೇಕಿಹುದು ನನಗೆ, ಹೇ ದೇವಾ?

ಊನವಿಲ್ಲದೆ ಇರುವ ಅಂಗಗಳ ಕೊಟ್ಟಿರುವೆ
ಭಾವನೆಯನುಚ್ಚರಿಪ ಶಕ್ತಿಯನು ಕೊಟ್ಟಿರುವೆ
ಇಚ್ಛೆಗಳನನುಭವಿಪ ಯೋಗ್ಯತೆಯ ಕೊಟ್ಟಿರುವೆ
ಇನ್ನೇನು ಬೇಕಿಹುದು ನನಗೆ, ಹೇ ದೇವಾ?

ಯಂತ್ರಗಳ ರಚಿಸುವಾ ಶಕ್ತಿಯನು ಕೊಟ್ಟಿರುವೆ
ಮಂತ್ರಗಳ ಸಾಧನೆಯ ಶಕ್ತಿಯನು ಕೊಟ್ಟಿರುವೆ
ತಂತ್ರಗಳ ಗುಟ್ಟರಿವ ಶಕ್ತಿಯನು ಕೊಟ್ಟಿರುವೆ
ಇನ್ನೇನು ಬೇಕಿಹುದು ನನಗೆ, ಹೇ ದೇವಾ?

ಸಾಕೆಂದೆನೇನಿನಿತೆ?! ಇಲ್ಲ, ಇಲ್ಲವು, ದೇವಾ
ಕರುಣಿಸೈ ನಿನ್ನನ್ನೆ ಎಲ್ಲೆಲ್ಲು ಕಾಣುವಾ,
ಸತತ ನಿನ್ನಯ ಸೇವೆ, ಸ್ತುತಿಗಳನೆ ನಡೆಸುವಾ,
ಕೊನೆಗೆ ನಿನ್ನೊಳೆ ಬೆರೆವ ವರವ ಹೇ ದೇವಾ!

—ಎಂ.ಟಿ ಸಂಪತ್‌ಕುಮಾರನ್.

# ನವಧಾಭಕ್ತಿ

- 'ರಘುಸುತ'

ಪರಮಾತ್ಮನ ಸಾನ್ನಿಧ್ಯವನ್ನು ಪಡೆಯುವ ಮಾರ್ಗಗಳಲ್ಲಿ ಭಕ್ತಿಯೂ ಒಂದು. ಇದು ಉತ್ತಮರಿಗಷ್ಟೆ ಲಭ್ಯವಾಗುವಂತಹುದಲ್ಲ; ದುಷ್ಟರಿಗೂ ಲಭ್ಯವಾಗುವಂತಹುದು ಪಾಮರರು ಹಾಗೂ ವಿಷಯೋಪಭೋಗಗಳಲ್ಲಿ ನಿರತರಾಗಿರುವವರಿಗೆ ಸಾಧನೆ ಮಾಡುವುದನ್ನು ತಿಳಿಸಿ, ಅಂತಹವರನ್ನು ಸರ್ವಧರ್ಮಪರಾಯಣರನ್ನಾಗಿ ಮಾಡಿ, ಅವರಲ್ಲಿ ಮುಮುಕ್ಷತ್ವವನ್ನು ಉತ್ಪನ್ನಮಾಡಿ, ಅವರಲ್ಲಿ ಜ್ಞಾನ ಬೀಜ ಬಿತ್ತಿ, ಅವರು ಜ್ಞಾನಿಗಳಾದ ಮೇಲೆ, ಕಡೆಯಲ್ಲಿ ಮೋಕ್ಷವನ್ನು ಕರುಣಿಸುವ ಅನೇಕ ಸಾಧನಗಳಲ್ಲಿ 'ನವಧಾಭಕ್ತಿ'ಯು ಒಂದು ಸಾಧನವಾಗಿದೆ.

ಶೃಣ್ವಂತಿ ಗಾಯಂತಿ ಗೃಣಂತ್ಯಭೀಕ್ಷ್ಣಶಃ
ಸ್ಮರಂತಿ ನಂದಂತಿ ತವೇ ಹಿತಂ ಜನಾಃ
ತ ಏವ ಪಶ್ಯಂತ್ಯ ಚಿರೇಣ ತಾವಕಂ
ಭವ ಪ್ರವಾಹೋಪರಮಂ ಪದಾಂಬುಜಮ್
(ಶ್ರೀಮದ್ಭಾಗವತ ೧,೮,೩೬)

ಎಲೈ ಪರಮಾತ್ಮನೆ! ಯಾವ ಮಾನವನು ನಿನ್ನ ಚರಿತ್ರೆಯ ಶ್ರವಣ, ಗಾನ, ಕೀರ್ತನ, ಸ್ಮರಣೆ ಹಾಗೂ ಸ್ತವನಗಳನ್ನು ನಿರಂತರವಾಗಿ ಮಾಡುವನೊ, ಅಂತಹವನೇ ಈ ಸಾಂಸಾರಿಕ ಕೋಟಲೆಗಳಿಂದ ದೂರವಾಗಿ ಶಾಂತಿಯನ್ನು ಪಡೆದು, ನಿನ್ನ ಚರಣ ಕಮಲದ ದರ್ಶನವನ್ನು ಶೀಘ್ರವೇ ಪಡೆಯುತ್ತಾನೆ

## ೧. ಶ್ರವಣ

ಯಾರಿಗೆ ವಿಷ್ಣು ವ್ಯಾಪಕಪರಮಾತ್ಮನ ವಿಷಯದಲ್ಲಿ ಸ್ವಲ್ಪವೂ ಜ್ಞಾನವಿಲ್ಲವೊ, ಅದನ್ನು ಅರಿಯಲೂ ಕೂಡ ಇಚ್ಛೆ ಇಲ್ಲವೊ ಅಂತಹವನು ನಿರಂತರವಾಗಿ ಪರಮಾತ್ಮನ ಗುಣ ವಿಶೇಷಗಳಿಂದ ಕೂಡಿದ ಗ್ರಂಥಗಳ ಶ್ರವಣ ಮಾಡುತ್ತಾ ಹೋದಂತೆ, ಪರಮಾತ್ಮನ ವ್ಯಾಪಕತೆಯ ಬಗ್ಗೆ ನಿಧಾನ ನಿಧಾನವಾಗಿ ಶ್ರದ್ಧಾ ಭಕ್ತಿಗಳು ಅವನಲ್ಲಿ ಉತ್ಪನ್ನವಾಗುತ್ತವೆ

ಶ್ರವಣಂ ನಾಮಚರಿತ
ಗುಣಾದೀನಾಂ ಶ್ರುತಿರ್ಭವೇತ್

'ಪರಮಾತ್ಮನ ಹೆಸರು, ಚರಿತ್ರೆ ಹಾಗೂ ಗುಣಾದಿಗಳನ್ನು ಆಲಿಸುವುದೇ ಶ್ರವಣಭಕ್ತಿ ನಾಮ ಶ್ರವಣದ ಮಹಾತ್ಮೆಯು ಗರುಡ ಪುರಾಣದಲ್ಲಿ-

ಸಂಸಾರ ಸರ್ಪ ಸಂದಷ್ಟ
ನಷ್ಟ ಚೇಷ್ಟೈಕ ಭೇಷಜಮ್
ಕೃಷ್ಣೇತಿ ವೈಷ್ಣವಂ ಮಂತ್ರಂ
ಶ್ರುತ್ವಾ ಮುಕ್ತೋ ಭವೇನ್ನರಃ

-ಎಂದು ತಿಳಿಸಿದೆ ಅಂದರ -

'ಸಂಸಾರ ರೂಪದ ಸರ್ಪದ ಕಚ್ಚುವಿಕೆಯಿಂದ ಯಾರು ಚೇತನಹೀನನಾಗುವನೊ, ಅತಹವನಿಗೆ 'ಕೃಷ್ಣ' ಎನ್ನುವ ವೈಷ್ಣವ ಮಂತ್ರವು ಔಷಧ ರೂಪವಾಗಿರುತ್ತದೆ ಇದೊಂದೇ ಪರಿಹಾರವು ಇದರ ಶ್ರವಣದಿಂದಷ್ಟೆ ಅವನು ಮುಕ್ತನಾಗುತ್ತಾನೆ'

ಪರಮಾತ್ಮನ ಕದೆಯ ಶ್ರವಣದ ಮಹಿಮೆಯನ್ನು ಶ್ರೀಮದ್ಭಾಗವತವು-

ತಸ್ಮಿನ್ ಮಹನ್ಮುಖರಿತಾ ಮಧುಬಿಚ್ಚರಿತ್ರ
ಪೀಯೂಷಶೇಷ ಸರಿತಃ ಪರಿತಃ ಸ್ರವಂತಿ
ತಾ ಯೇ ಪಿಬಂತ್ಯವಿತೃಷೋ ನೃಪಗಾಢಕರ್ಣೈಃ
ತನ್ನ ಸ್ಪೃಶಂತ್ಯ ಶನತೃಡಭಯ ಶೋಕಮೋಹಾಃ

- ಎಂದು ತಿಳಿಸಿದೆ ಅಂದರೆ-

'ಅಂತಹ ಸತ್ಸಂಗದಲ್ಲಿ ಮಹಾತ್ಮರ ಬಾಯಿಯಿಂದ ಹೊರಬಂದ ಶ್ರೀಹರಿ ಚರಿತ್ರವೆನ್ನುವ ಶುದ್ಧ ಅಮೃತದ ನದಿಗಳು ನಾಲ್ಕೂದಿಕ್ಕುಗಳಲ್ಲಿ ಹರಿಯುತ್ತವೆ ಎಲೈ ರಾಜನೆ! ಅಂತಹ ನದಿಗಳನ್ನು ಬಾಯಾರಿಕೆಯಿಂದ ಕೂಡಿದ ಕರ್ಣಪಟಗಳ ಮುಖಾಂತರ ಪಾನ ಮಾಡಿ ಯಾರು ಆಲಿಸುವರೊ, ಶ್ರವಣ ಮಾಡುವರೊ, ಅಂತಹವರನ್ನು ಹಸಿವು, ಬಾಯಾರಿಕೆ, ಭಯ, ಶೋಕ, ಮೋಹಗಳು ಸ್ಪರ್ಶಿಸುವುದೂ ಇಲ್ಲ'

ಭಗವಂತನ ಗುಣಗಳ ಶ್ರವಣದ ವರ್ಣನೆಯು ಶ್ರೀಮದ್ಭಾಗವತದಲ್ಲಿ-

ಯಸ್ತೂತ್ತಮ ಶ್ಲೋಕಗುಣಾನುವಾದಃ
ಪ್ರಸ್ತೂಯತೇऽಭೀಕ್ಷ್ಣ ಸಮಂಗಲಘ್ನಃ
ತಮೇವ ನಿತ್ಯಂ ಶೃಣುಯಾದಭೀಕ್ಷ್ಣಂ
ಕೃಷ್ಣೇऽಮಲಾಂ ಭಕ್ತಿಮಭೀಪ್ಸಮಾನಃ

- ಎಂಬುದಾಗಿ ತಿಳಿಸಿವ ಅಂದರೆ-

'ಶ್ರೀಕೃಷ್ಣನ ನಿರ್ಮಲ ಭಕ್ತಿಯನ್ನು ಪಡೆಯದೇಕೆನ್ನುವವರು ನಿತ್ಯನಿರಂತರವಾಗಿ ಆತನ ಅಮಂಗಲ ನಿವಾರಣೆ ಮಾಡುವ ಗುಣಾನುವಾದವನ್ನು (ಗುಣ ವಿಶೇಷಣಗಳನ್ನು) ಮತ್ತೆ ಮತ್ತೆ ಆಲಿಸಬೇಕು'

ಈ ರೀತಿಯಲ್ಲಿ ಉತ್ಪನ್ನವಾದ ಭಕ್ತಿಯ ಮುಖಾಂತರ ಆ ಭಕ್ತಿಯ ರಸಾನುಭವವಾಗಿ ಎರಡನೆಯದಾದ ಕೀರ್ತನ ಭಕ್ತಿಯು ಉದ್ಭವವಾಗುತ್ತದೆ

## ೨. ಕೀರ್ತನ

ಪರಮಾತ್ಮನ ಕೀರ್ತಿಯನ್ನು ಹರಡುವ ರೀತಿಗೆ 'ಕೀರ್ತನ' ಎಂದು ಕರೆಯಲಾಗುತ್ತದೆ ಭಗವಂತನ ನಾಮೋಚ್ಚಾರಣೆಯಿಂದ ಭಕ್ತಿ ರಸವು ಉತ್ಪನ್ನವಾಗುತ್ತದೆ ಪದ್ಯ ಅಥವಾ ಗದ್ಯ, ಒಂಟಿಯಾಗಿ ಅಥವಾ ಇತರರೊಂದಿಗೆ ಆತನ ನಾಮೋಚ್ಚಾರಣೆ ಮಾಡುವುದರಿಂದ ಆ ಪರಿಸರದಲ್ಲಿ, ಇತರರಲ್ಲಿ, ತನ್ನ ಹೃದಯದಲ್ಲಿ ಭಗವಂತನ ಹೆಸರು ಹರಡುವುದರ ಕಾರ್ಯವು ಪ್ರಾರಂಭವಾಗುತ್ತದೆ ಇದರಿಂದ 'ಕೀರ್ತನ ಭಕ್ತಿ'ಯು ಉತ್ಪನ್ನವಾಗುತ್ತದೆ

ನಾಮಲೀಲಾಗುಣಾದೀನಾಮ್
ಉಚ್ಚೈರ್ಭಾಷಾ ತು ಕೀರ್ತನಮ್



'ಪರಮಾತ್ಮನ ನಾಮ, ಲೀಲೆ ಹಾಗೂ ಗುಣಗಳನ್ನು ಉಚ್ಚಸ್ವರದಲ್ಲಿ ಉಚ್ಚಾರಣೆ ಮಾಡುವುದೇ ಕೀರ್ತನೆ'

ಶ್ರೀ ವಿಷ್ಣುಧರ್ಮದಲ್ಲಿ ನಾಮ - ಸಂಕೀರ್ತನೆಯ ಮಹಿಮೆಯ ವರ್ಣನೆ ಇದೆ

ಕೃಷ್ಣೇತಿ ಮಂಗಲಂ ನಾಮ
ಯಸ್ಯ ವಾಚೀ ಪ್ರವರ್ತತೇ
ಭಸ್ಮೀ ಭವಂತಿ ರಾಜೇಂದ್ರ
ಮಹಾಪಾತಕ ಕೋಟಯಃ

'ಹೇ ರಾಜೇಂದ್ರ! 'ಕೃಷ್ಣ' ಎನ್ನುವ ಪರಮ ಮಂಗಲಮಯ ಹೆಸರು ಯಾರ ವಾಣಿಯಲ್ಲಿ ನೆಲೆಸಿರುತ್ತದೆಯೊ, ಅಂತಹವರ ಕೋಟಿ (ಬಹಳಷ್ಟು) ಪಾಪಗಳು ಭಸ್ಮವಾಗಿ ಹೋಗುತ್ತವೆ'

ಪರಮಾತ್ಮನ ಲೀಲಾ-ಕೀರ್ತನೆಯ ಸಂಬಂಧದಲ್ಲಿ ಶ್ರೀಮದ್ಭಾಗವತದಲ್ಲಿ-

ಸೋಽಹಂ ಪ್ರಿಯಸ್ಯ
ಸುಹೃದಃ ಪರದೇವತಯಾ
ಲೀಲಾಕಥಾಸ್ತವ ನೃಸಿಂಹ
ವಿರಂಚಿಗೀತಾಃ
ಅಂಜಸ್ತಿತರ್ಮ್ಯನು ಗೃಣನ್
ಗುಣ ವಿಪ್ರಮುಕ್ತೋ
ದುರ್ಗಾಣಿ ತೇ ಪದಯುಗಾಲಯ
ಹಂಸ ಸಂಗಃ

'ಹೇ ನೃಸಿಂಹನೇ! ನೀನು ನಮ್ಮ ಪ್ರಿಯನೂ, ಸಹೃದಯನೂ ಹಾಗೂ ಪರಮದೇವತೆಯೂ ಆಗಿರುವೆ, ಬ್ರಹ್ಮಾದಿ ದೇವತೆಗಳು ನಿನ್ನ ಲೀಲಾ ಸಂಬಂಧದ ಕಥಾನಕಗಳ ಕೀರ್ತನೆ ಮಾಡುವರು ಅಂತಹ ಕಥಾನಕಗಳನ್ನೆ ನಾನೂ ಕೀರ್ತನೆ ಮಾಡುವೆನು ಈ ರೀತಿಯಲ್ಲಿ ನಾನು ನಿನ್ನ ಚರಣಾರವಿಂದಗಳ ಆಶ್ರಯಪಡೆಯುವೆನು ಹೀಗೆ ನಿನ್ನ ಪದಾಶ್ರಿತನಾಗಿ, ಪರಮಹಂಸದ ಸಹಯೋಗದಿಂದ, ಮಾಯಾಬಂಧನದಿಂದ ಮುಕ್ತನಾಗಿ, ಸಹಜ ರೀತಿಯಲ್ಲಿ ಸಂಸಾರ ಸಾಗರದ ಕಷ್ಟಗಳಿಂದ ದೂರವಾಗಿ ಹೋಗುವೆನು'

ಇದೇ ಭಗವದ್ಗುಣ ಕೀರ್ತನೆಯ ವರ್ಣನೆಯು ಶ್ರೀಮದ್ಭಾಗವತದಲ್ಲಿ ಈ ರೀತಿ ವರ್ಣಿಸಿದೆ-

ಇದಂ ಹಿ ಪುಂಸಸ್ತಪಸಃ ಶ್ರುತಸ್ಯ ವಾ
ಸ್ವಿಷ್ಟಸ್ಯ ಸೂಕ್ತಸ್ಯ ಚ ಬುದ್ಧಿ ದತ್ತಯೋಃ
ಅವಿಚ್ಯುತೋಽರ್ಥಃ ಕವಿಭಿರ್ನಿರೂಪಿತೋ
ಯದುತ್ತಮ ಶ್ಲೋಕ ಗುಣಾನುವರ್ಣನಮ್

'ಉತ್ತಮ ಶ್ಲೋಕನಾದ ಶ್ರೀಕೃಷ್ಣನ ಗುಣ ಕೀರ್ತನೆಯನ್ನು ಕವಿಗಳು ಆ ಪರಮಾತ್ಮನ ತಪಸ್ಸೆಂದೂ, ವೇದಾಧ್ಯಯನವೆಂದೂ, ಯಜ್ಞ, ಮಂತ್ರಪಠಣ, ಜ್ಞಾನ ಹಾಗೂ ದಾನಫಲಗಳಿಗೆ ಸಮಾನವೆಂದೂ ವರ್ಣಿಸಿದ್ದಾರೆ ಅಂದರೆ ಶ್ರೀಹರಿಯ ಗುಣಗಳ ಕೀರ್ತನೆಯು ಎಲ್ಲ ಧರ್ಮಗಳಿಗಿಂತಲೂ ಶ್ರೇಷ್ಠವಾದುದು ಎಂಬ ಭಾವ'

ಹೀಗೆ ಈ ಕೀರ್ತನ ಭಕ್ತಿಯು ಸ್ಮರಣ ಭಕ್ತಿಗೆ ಪ್ರೇರಣೆ ನೀಡುತ್ತದೆ

## ೩. ಸ್ಮರಣೆ

ಯಥಾ ಕಥಂಚಿನ್ಮನಸಾ
ಸಂಬಂಧಃ ಸ್ಮೃತಿರುಚ್ಯತೆ

'ಯಾವುದಾದರೊಂದು ರೀತಿಯಲ್ಲಿ ಮನಸ್ಸಿನೊಂದಿಗೆ ಶ್ರೀಹರಿಯ ಸಂಬಂಧ ಉಂಟಾಗುವುದೊ ಅದನ್ನೇ ಸ್ಮರಣೆ ಎಂದು ಕರೆಯಲಾಗುವುದು'.

ಸ್ಮತೇ ಸಕಲ ಕಲ್ಯಾಣ ಭಾಜನಂ
ಯತ್ರ ಜಾಯತೇ
ಪುರುಷಂ ತಮಜಂ ನಿತ್ಯಂ
ವ್ರಜಾಮಿ ಶರಣಂ ಹರಿಮ್

'ಯಾರ ಸ್ಮರಣೆಯಿಂದ ಮಾನವನು ಎಲ್ಲ ರೀತಿಯ ಕಲ್ಯಾಣಗಳೂ ಉತ್ತಮಾಂಶಗಳ ನಿವಾಸ ಸ್ಥಾನವಾಗುವನೊ, ಅಂತಹ ಜನನಮರಣ ರಹಿತ ಶ್ರೀಹರಿಗೆ ನಾನು ಶರಣಾಗುವೆನು'

ಪ್ರಯಾಣೇ ಚ ಅಪ್ರಯಾಣೇಚ
ಯನ್ನಾಮ ಸ್ಮರತಾಂ ನೃಣಾಂ
ಸದ್ಯೋ ನಶ್ಯತಿ ಪಾಪೌಘೋ
ನಮಸ್ತಸ್ಮೈ ಚಿದಾತ್ಮನೇ

ಎಂದು ವಿಷ್ಣುಪುರಾಣವು ತಿಳಿಸುತ್ತದೆ. ಅಂದರೆ-

'ಸಾಯುವಾಗ ಅಥವಾ ಜೀವಿಸಿರುವಾಗ ಯಾರ ಹೆಸರನ್ನು ಸ್ಮರಿಸುವುದರಿಂದ ವ್ಯಕ್ತಿಯ ಪಾಪ - ಪುಂಜಗಳು ನಷ್ಟವಾಗುವುವೊ, ಅಂತಹ ಸಚ್ಚಿದಾನಂದ ವಿಗ್ರಹನಾದ ಶ್ರೀಕೃಷ್ಣನನ್ನು ನಾವು ನಮಸ್ಕರಿಸುತ್ತೇವೆ'

ಶ್ರವಣ, ಕೀರ್ತನಗಳು ಬಾಹ್ಯ ಸಾಧನಗಳೆಂದು ನಂಬಲಾಗಿದೆ ಇವುಗಳ ಸಾಧನಯಲ್ಲಿ ಬಾಹ್ಯ ಕ್ರಿಯೆಯ ಹಾಗೂ ಬೇರೆ ವ್ಯಕ್ತಿಗಳ ಸಹಾಯ ಬೇಕಾಗುತ್ತದೆ ಆದರೆ ಈ ಬಾಹ್ಯ ಸಂಬಂಧವಿಲ್ಲದೆ ಒಬ್ಬಂಟಿಗನಾಗಿ ಪರಮಾತ್ಮನ ಗುಣಗಳು ಹಾಗೂ ಕಥಾನಕಗಳನ್ನು ನೆನಪಿಸಿಕೊಳ್ಳುವುದನ್ನೇ 'ಸ್ಮರಣ ಭಕ್ತಿ ಎಂದು ಕರೆಯಲಾಗುವುದು

ಭಗವಂತನ ಯಾವುದೇ ಕಥಾನಕವನ್ನು ನೆನಪಿಸಿಕೊಳ್ಳುವಿಕೆಯನ್ನು ಮೂರು ರೂಪಗಳಲ್ಲಿ ನಡೆಸಬಹುದು - ಭಗವಂತನ ಸರ್ವವ್ಯಾಪಕತೆ, ಸರ್ವಜ್ಞತೆ ಹಾಗೂ ಸರ್ವ ಶಕ್ತಿತ್ವ. ಈ ರೀತಿಯ ಮೂರು ರೀತಿಗಳಲ್ಲಿ ಪರಮಾತ್ಮನ ಸ್ಮರಣೆ ಮಾಡುವುದರಿಂದ ಪಾಮರರು, ವಿಷಯ ಲೋಲುಪರು, ದುರಾಚಾರಿಗಳೂ ಕೂಡ ಉತ್ತಮಗೊಳ್ಳುವರು ಪರಮಾತ್ಮನ ಸರ್ವವ್ಯಾಪಕತೆಯನ್ನು ನೆನಪಿನಲ್ಲಿ ಇಟ್ಟುಕೊಳ್ಳುವುದರಿಂದ, 'ಈಗ ನಾನು ಪರಮಾತ್ಮನಿಂದ ತಪ್ಪಿಸಿಕೊಳ್ಳಲಾರೆ' ಎಂದು ತಿಳಿದು ವ್ಯಕ್ತಿಯು ತನ್ನ ದುರಾಚಾರಗಳಿಂದ ದೂರವಾಗಲು ಪ್ರಯತ್ನಿಸುವನು ಈ ರೀತಿಯ ನಿಧಾನದ ಬದಲಾವಣೆಯಿಂದ, ಆ ವ್ಯಕ್ತಿಯು ಕಡೆಯಲ್ಲಿ ಖಂಡಿತವಾಗಿಯೂ ದುಷ್ಕೃತೆಗಳಿಂದ ದೂರವಾಗುವನು 'ಅಪಿ ಚೇತ್ ಸುದುರಾಚಾರೋ ಭಜತೇ ಮಾಮನನ್ಯ ಭಾಕ್' ಎನ್ನುವ ಪರಮಾತ್ಮನ ವಾಣಿಯು ಶ್ರವಣ, ಕೀರ್ತನ ಭಕ್ತಿಗಳೊಂದಿಗೆ ಜೋಡಿಸಲ್ಪಟ್ಟಿರುತ್ತದೆ ಅಂತೆಯೇ 'ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ' ಎನ್ನುವ ವಾಣಿಯೂ ಕೂಡ ಸ್ಮರಣ ಭಕ್ತಿಯ ಮುಖಾಂತರ ತನ್ನನ್ನು ತಾನು ಆ ವ್ಯಕ್ತಿಯು ಉತ್ತಮಗೊಳ್ಳುವನು ಈ ರೀತಿಯಲ್ಲಿ ಉತ್ತಮಗೊಳ್ಳುವುದು ಸಾಧ್ಯವಾಗದಿದ್ದಲ್ಲಿ 'ಸಾಧು' ಹಾಗೂ 'ಸಮ್ಯಗ್ವ್ಯವಸಿತಃ' ಎನ್ನುವ ಪದಗಳಿಗೆ ಅರ್ಥವೇ ಇಲ್ಲವಾಗುತ್ತದೆ ಆದುದರಿಂದ ಭಗವಂತನ ಕಥಾನಕವು ವ್ಯರ್ಥವಾಗುವುದಿಲ್ಲ ಒಂದು ವೇಳೆ ವ್ಯರ್ಥವಾದರೆ ಅದು ತೋರಿಕೆ ಭಕ್ತಿ ಎಂದಾಗುತ್ತದೆ ನಿಜವಾದ ಭಕ್ತಿಯಲ್ಲಿ ಪರಮಾತ್ಮನ ವಾಕ್ಯವು ಚರಿತಾರ್ಥಗೊಳ್ಳುವುದು

## ೪. ಪಾದಸೇವನೆ

ಮಮ ನಾಮ ಸದಾ ಗ್ರಾಹೀ
ಮಮ ಸೇವಾ ಪ್ರಿಯಃ ಸದಾ
ಭಕ್ತಿಸ್ತಸ್ಮೈ ಪ್ರದಾತವ್ಯಾ
ನ ತು ಮುಕ್ತಿಃ ಕದಾಚನ

'ಯಾರು ಸದಾ ನನ್ನ ಹೆಸರನ್ನು ನೆನೆಯುವರೋ, ನನ್ನ ಸೇವೆಯಲ್ಲಿ ಸರ್ವೋತ್ತಮ ಪ್ರೀತಿಯನ್ನು ಪಡೆಯುವರೋ, ಅಂತಹವರು ಬೇಡುವುದು ಭಕ್ತಿಯೇ ಹೊರತು, ಮುಕ್ತಿಯಲ್ಲ'

ಸ್ಮರಣ ಭಕ್ತಿಯು ಪಾದಸೇವನ ಭಕ್ತಿಯ ಕಡೆ ವ್ಯಕ್ತಿಯನ್ನು ಕರೆದೊಯ್ಯುತ್ತದೆ ಇದು ಭಗವಂತನ

ಪಾದಗಳ ಸೇವೆ ಎಂಬರ್ಥವಾದರೂ ವಿಶಾಲದೃಷ್ಟಿಯಿಂದ ವೀಕ್ಷಿಸಿದಲ್ಲಿ ಪಾದವೆಂದರೆ ಗುರು ಅಥವಾ ಪ್ರತಿಮಾಸೇವೆ ಎಂಬುದಾಗಿಯೂ ಅರ್ಥ ಮಾಡಬಹುದು ಅಲ್ಲದೆ ಪಾದ ಎನ್ನುವುದು 'ಪಾದೋಸ್ಯ ವಿಶ್ವಾಭೂತಾನಿ' ಎನ್ನುವ ಅರ್ಥವನ್ನು ಕೊಡುವುದರಿಂದ, ಈ ರೀತಿಯ ನ್ಯಾಸಮಾಡಿ, ಪ್ರಪಂಚವನ್ನೇ ಭೂತರೂಪ ಭಗವಾನನ ಅಂಶವೆಂದು ತಿಳಿದು ಜನತೆಯ ಸೇವೆ ಮಾಡಬೇಕು ಭೂತ್ರಮಾತ್ರ, ಪ್ರಾಣಿ ಮಾತ್ರ, ಜನತೆ ಹಾಗೂ ದೇಶ - ಇವುಗಳಲ್ಲಿ ಭಗವಂತನ ಅಂಶವಿರುವುದರಿಂದ ಇವುಗಳ ಸೇವೆ ಮಾಡುವುದು, ಪರಮಾತ್ಮನ ಪಾದಸೇವೆಗೆ ಸಮಾನವೆಂದು ತಿಳಿಯಬೇಕು ಎಲ್ಲ ವರ್ಣಗಳ, ಆಶ್ರಮಗಳ ಜನರ ಸೇವೆ ಮಾಡಬೇಕು ಇದು ಒಂದು ರೀತಿಯಲ್ಲಿ ಸಾಮಾನ್ಯಧರ್ಮವೂ ಹೌದು ಇದೇ ಮುಂದುವರೆದು, ವಿಶೇಷ ಧರ್ಮವಾಗಿ, ಅದು ಅರ್ಚನ-ಭಕ್ತಿ ಎಂಬ ಹೆಸರನ್ನು ಪಡೆಯುತ್ತದೆ

## ೫ ಅರ್ಚನ

ಶುದ್ಧಿನ್ಯಾಸಾದಿಪೂರ್ವಾಂಗ<br>
ಕರ್ಮ ನಿರ್ವಾಹ ಪೂರ್ವಕಮ್<br>
ಅರ್ಚನಂ ತೂಪಚಾರಾಣಾಂ<br>
ಸ್ಯಾನ್ಮಂತ್ರೇಣೋಪಪಾದನಮ್

'ಭೂತ ಶುದ್ಧಿ ಹಾಗೂ ಮಾತೃಕಾನ್ಯಾಸ - ಇತ್ಯಾದಿಗಳಿಂದ ಪೂರ್ವಾಂಗದ ನಿರ್ವಾಹ ಮಾಡಿ, ಮಂತ್ರಗಳ ಮುಖಾಂತರ ಶ್ರೀಕೃಷ್ಣನಿಗೆ ಗಂಧ, ಪುಷ್ಪ ಇತ್ಯಾದಿ ವಿವಿಧ ಉಪಚಾರಗಳನ್ನು ಅರ್ಪಿಸುವುದೇ ಅರ್ಚನೆಯಾಗಿರುತ್ತದೆ'

ಭಾಗವತದ ದಶಮ ಸ್ಕಂಧದಲ್ಲಿ ಸುದಾಮ ಎನ್ನುವ ಬ್ರಾಹ್ಮಣನು ದ್ವಾರಕೆಯಿಂದ ಹಿಂತಿರುಗುತ್ತಾ-

ಸ್ವರ್ಗಾಪವರ್ಗಯೋಃ ಪುಂಸಾಂ<br>
ರಸಾಯಾಂ ಭುವಿ ಸಂಪದಾಮ್<br>
ಸರ್ವಾಸಾಮಪಿ ಸಿದ್ಧೀನಾಂ<br>
ಮೂಲಂ ತಚ್ಚರಣಾರ್ಚನಮ್

ಎಂದು ತನಗೆ ತಾನೇ ಹೇಳಿಕೊಳ್ಳುತ್ತಾನೆ ಅಂದರೆ 'ಆ ಪರಮಾತ್ಮ ಶ್ರೀಕೃಷ್ಣನ ಚರಣಗಳ ಪೂಜೆಯೇ ಮಾನವರಿಗೆ ಸ್ವರ್ಗ, ಮೋಕ್ಷ, ಈ ಲೋಕದ ಸಂಪತ್ತು ಹಾಗೂ ಪಾತಾಳಲೋಕದ ಭೋಗಗಳು ಹಾಗೂ ಅಣಿಮಾದಿ ಎಲ್ಲ ಸಿದ್ಧಿಗಳಿಗೂ ಮೂಲಕಾರಣವಾಗಿರುತ್ತವೆ'

ಇದೇ ವಿಷಯವು 'ವಿಷ್ಣು ರಹಸ್ಯ'ದಲ್ಲಿ ಹೇಳಿದೆ-

ಶ್ರೀ ವಿಷ್ಣೋರರ್ಚನಂ ಯೇ ತು<br>
ಪ್ರಕುರ್ವಂತು ನರಾ ಭುವಿ<br>
ತೇ ಯಾಂತಿ ಶಾಶ್ವತಂ<br>
ವಿಷ್ಣೋರಾನಂದಂ ಪರಮಂ ಪದಮ್

'ಈ ಭೂಮಿಯ ಮೇಲಿನ ಯಾವನೇ ಮಾನವನು ಶ್ರೀ ಮಹಾವಿಷ್ಣುವಿನ ಅರ್ಚನೆಯನ್ನು ಮಾಡುವನೊ, ಅವನು ಆ ಭಗವಂತನ ನಾಶರಹಿತ, ಪರಮಾನಂದಮಯ ಪರಮಧಾಮವನ್ನು ಹೊಂದುವನು'

ಇಲ್ಲಿ ಅರ್ಚನೆ ಎಂದರೆ ಬರೀ ದೇವರ ಪೂಜೆ ಎಂದಷ್ಟೇ ಭಾವಿಸಬಾರದು ಎಲ್ಲ ವರ್ಣಗಳವರೂ, ಧರ್ಮಗಳವರೂ ತಮ್ಮ ಕರ್ಮಾನುಸಾರ ಅನುಷ್ಠಾನ ಮಾಡಬೇಕಾದ ಕರ್ತವ್ಯಗಳನ್ನು (ಕರ್ಮಕಾಂಡದ ಷಟ್‌ಕರ್ಮಗಳನ್ನು) ನಿರ್ವಹಿಸುವುದೇ 'ಅರ್ಚನ' ಸೇವೆ ಇತ್ಯಾದಿ ಧರ್ಮದಿಂದ ಪ್ರತಿಯೊಬ್ಬನೂ ಶಾಸ್ತ್ರೋಕ್ತವಾದ ತನ್ನ ವರ್ಣಾಶ್ರಮ ಧರ್ಮಗಳಲ್ಲಿ ಪ್ರವೃತ್ತನಾಗಿರುವನು ಇದರಿಂದಾಗಿ ಭಕ್ತಿಯೊಂದಿಗೆ ಕರ್ಮಾನುಷ್ಠಾನವೂ ಉಂಟಾಗುತ್ತದೆ ಇದು ಮುಂದಿನದಾದ ವಂದನ ಭಕ್ತಿಗೆ ದಾರಿ ಮಾಡುತ್ತದೆ

## ೬. ವಂದನ (ನಮಸ್ಕಾರ)

ವಂದನ ಭಕ್ತಿಯ ಮಾಹಾತ್ಮೆಯನ್ನು ಶಾಸ್ತ್ರಗಳು ಈ ರೀತಿ ವಿವರಿಸಿವೆ-

ಏಕೋಽಪಿ ಕೃಷ್ಣಸ್ಯ ಕೃತಃ ಪ್ರಣಾಮೋ<br>
ದಶಾಶ್ವಮೇಧಾವಭೃಥೈರ್ನ ತುಲ್ಯಃ<br>
ದಶಾಶ್ವಮೇಧೀ ಪುನರೇತಿ ಜನ್ಮ<br>
ಕೃಷ್ಣಪ್ರಣಾಮೀ ನ ಪುನರ್ಭವಾಯ

'ಅಶ್ವಮೇಧ ಯಜ್ಞದ ಅಂತ್ಯದಲ್ಲಿ ಮಾಡುವ ದೀಕ್ಷಾಂತ ಸ್ನಾನ ಹಾಗೂ ಭಗವಾನ್ ಶ್ರೀಕೃಷ್ಣನಿಗೆ ಮಾಡುವ ಒಂದು ಸಲದ ನಮಸ್ಕಾರ - ಇವೆರಡರ ಫಲ ಒಂದೇ ಆಗಿರುವುದಿಲ್ಲ ಏಕೆಂದರೆ ಹತ್ತು ಅಶ್ವಮೇಧ ಯಜ್ಞಗಳನ್ನು ಮಾಡಿದ ವ್ಯಕ್ತಿಗೆ ಪುಣ್ಯವೇನಾದರೂ ಕ್ಷೀಣಿಸಿದಲ್ಲಿ, ಮತ್ತೆ ಮಾನವ ಜನ್ಮವನ್ನು ಎತ್ತಬೇಕಾಗುತ್ತದೆ ಆದರೆ ಶ್ರೀಕೃಷ್ಣ ಪರಮಾತ್ಮನಿಗೆ ಪ್ರಣಾಮ ಮಾಡಿದವನು ಮತ್ತೆ ಈ ಪ್ರಪಂಚಕ್ಕೆ ಹಿಂತಿರುಗಿ ಬರಲಾರ'

ಅರ್ಚನೆಯಲ್ಲಿ ಪರಮಾತ್ಮನಿಗೆ ನಮಸ್ಕಾರ ಮಾಡುವುದು ಇದ್ದೇ ಇರುತ್ತದೆಯಲ್ಲ, ಹಾಗಿದ್ದಲ್ಲಿ ವಂದನೆ ಎನ್ನುವುದನ್ನು ಬೇರೆ ಯಾಕೆ ಇಡಲಾಗಿದೆ - ಎನ್ನುವ ಸಂಶಯ ಬರುವುದು ಸಾಮಾನ್ಯ ಅಭಿಮಾನಿ, ಅಹಂಕಾರಿಗಳಾಗಿರುವವರು (ರಾವಣ, ಹಿರಣ್ಯಕಶಿಪು ನಂತಹವರು) ನಮ್ರತೆಯಿಂದ ಕೂಡಿದ ವಂದನೆಯನ್ನು ಮಾಡುವುದಿಲ್ಲ ತಾನು ಪರಮಾತ್ಮನ ಭಕ್ತನು, ಆತನನ್ನು ಪೂಜಿಸುತ್ತಿರುವೆನು - ಎನ್ನುವ ಅಹಂ ಅಂತಹವರಲ್ಲಿ ಇರಬಹುದು ಆದುದರಿಂದ ಅಹಂಕಾರ ರಹಿತ ವಂದನೆಯನ್ನೇ ಪರಮಾತ್ಮನು ಇಷ್ಟಪಡುವುದು ಅದರಿಂದ ವಂದನೆಯನ್ನು ಬೇರೆಯೇ ಆದ ಭಕ್ತಿಯೆಂದು ರೂಪಿಸಲಾಗಿದೆ ಜಗತ್ತೆಲ್ಲವೂ ಪರಮಾತ್ಮಮಯ ಎಂದು ತಿಳಿದು, ಅಹಂಕಾರ ದುರಭಿಮಾನಗಳನ್ನು ಬಿಟ್ಟು, ಕರ್ಮಾನುಸಾರ ಬಾಹ್ಯವಲ್ಲದಿದ್ದರೆ ಆಂತರಂಗಿಕವಾಗಿ, ಮನಃಪೂರ್ವಕವಾಗಿ ಪ್ರಣಾಮ ಮಾಡುವುದು - ನಿಜವಾದ ವಂದನಾರೂಪವಾಗಿರುತ್ತದೆ

## ೭. ದಾಸ್ಯ

ದಾಸ್ಯಂ ಕರ್ಮಾರ್ಪಣಂ ತಸ್ಯ<br>
ಕೈಂಕರ್ಯಮಪಿ ಸರ್ವಥಾ

'ವ್ಯಕ್ತಿಯು ತಾನು ಮಾಡುವ ಕರ್ಮಗಳನ್ನು ಭಗವಂತನಿಗೆ ಅರ್ಪಣೆ ಮಾಡುವುದೆ ದಾಸ್ಯ ಎಲ್ಲ ರೀತಿಯ ಭಗವಂತನ ಕಾರ್ಯಗಳನ್ನೂ, ಸೇವೆಗಳನ್ನೂ ದಾಸ್ಯವೆಂದೇ ಕರೆಯಲಾಗುತ್ತದೆ'

ಪರಿಚರ್ಯೆ ಮಾಡುವುದೂ ಕೂಡ ದಾಸ್ಯದ ಒಂದು ಭಾಗವೇ ಆಗಿರುತ್ತದ

ಕರ್ಮಾರ್ಪಣರೂಪ ದಾಸ್ಯದ ಸಂಬಂದದಲ್ಲಿ ಸ್ಕಂದಪುರಾಣದಲ್ಲಿ ಹೀಗೆಂದು ತಿಳಿಸಲಾಗಿದೆ-

ತಸ್ಮಿನ್ ಸಮರ್ಪಿತಂ ಕರ್ಮ<br>
ಸ್ವಾಭಾವಿಕ ಮಪೀಶ್ವರೆ<br>
ಭವೇದ್ಭಾಗವತಂ ಧರ್ಮಂ<br>
ತತ್ಕರ್ಮ ಕಿಮುತಾರ್ಪಿತಮ್

'ವರ್ಣಾಶ್ರಮ ಧರ್ಮಕ್ಕೆ ಉಚಿತವಾದ ಸ್ವಾಭಾವಿಕ ಕರ್ಮಗಳನ್ನು ಭಗವಂತನಲ್ಲಿ ಸಮರ್ಪಣೆ ಮಾಡುವುದು ಭಾಗವತಧರ್ಮ ಎಂದು ಕರೆಯಲಾಗುತ್ತದೆ ಜಪ, ಧ್ಯಾನ, ಅರ್ಚನೆ ಇತ್ಯಾದಿ ಪರಮಾತ್ಮ ಸಂಬಂಧ ಕರ್ಮಗಳನ್ನು, ಆ ಪರಮಾತ್ಮನನ್ನು ಪ್ರಸನ್ನಗೊಳಿಸುವುದಕ್ಕಾಗಿ ಮಾಡಿದ್ದೇ ಆದರೆ ಅದನ್ನು ಭಾಗವತ ಧರ್ಮ ಎಂದು ಕರೆಯದೆ ಇನ್ನೇನೆಂದು ಕರೆಯೋಣ!'

ಬೇರೆ ರೀತಿಯಾದ ದಾಸ್ಯದ ಸಂಬಂಧದ ಬಗ್ಗೆ ನಾರದ ಪುರಾಣದಲ್ಲಿ ಹೀಗೆಂದು ಹೇಳಲಾಗಿದೆ-

ಈಹಾ ಯಸ್ಯ ಹರೇರ್ದಾಸ್ಯೆ<br>
ಕರ್ಮಣಾ ಮನಸಾ ಗಿರಾ

ನಿಖಿಲಾಸ್ವಪ್ಯವಸ್ಥಾಸು
ಜೀವನ್ಮುಕ್ತಃ ಸ ಉಚ್ಯತೇ

'ಶರೀರ, ಮನಸ್ಸು ಹಾಗೂ ವಾಣಿಯ ಮುಖಾಂತರ ನಾನು ಶ್ರೀಹರಿಯ ದಾಸನಾಗಲು ಇಷ್ಟಪಡುತ್ತೇನೆ ಯಾರಿಗೆ ಇಂತಹ ಲಾಲಸೆ, ಆಸೆ ಇರುತ್ತದೆಯೊ ಅವನನ್ನು ಎಲ್ಲ ಅವಸ್ಥೆಗಳಿಂದಲೂ ಜೀವನ್ಮುಕ್ತನೆಂದು ಕರೆಯಲಾಗುತ್ತದೆ ಅಂದರೆ, ಅಂಥಹವನು ಜನನ ಮರಣಗಳ ಬಂಧನದಿಂದ ಮುಕ್ತನಾಗುವನು'

ಮಾನವನು ವರ್ಣಾಶ್ರಮಧರ್ಮಾನುಸಾರ ಪರಿಪೂರ್ಣ ಧರ್ಮಪಾಲನೆಯನ್ನು ಮಾಡಿ, ಅದರ ಅಂತರ್ಯವನ್ನು ಅರ್ಥಮಾಡಿಕೊಳ್ಳಬೇಕು. ಪರಮಾತ್ಮನ ಆಜ್ಞಾನುಸಾರ ಪೂರ್ಣರೂಪದಲ್ಲಿ ಅವನನ್ನು ಅನುಸರಿಸುವುದೇ ದಾಸ್ಯ ಎಂದರ್ಥ ವಿಷ್ಣುಪುರಾಣದಲ್ಲಿ ಭಗವಂತನ ಒಂದು ವಚನವು ಹೀಗಿದೆ-

ಶ್ರುತಿಸ್ಮೃತೀ ಮಮೈವಾಜ್ಞೇ
ಯಸ್ತೇ ಉಲ್ಲಂಘ್ಯ ವರ್ತತೇ
ಆಜ್ಞಾಚ್ಛೇದೀ ಮಮ ದ್ವೇಷೀ
ಮದ್ಭಕ್ತೋಽಪಿ ನ ವೈಷ್ಣವಃ

## ಧ್ವನಿವರ್ಧಕಗಳ ವಿತರಣೆ

ಹೈಂದವ ದೇವಾಲಯಗಳಿಗೆ ಕಾರ್ಯಕ್ರಮ ಪ್ರಸ್ತಾರಕ್ಕಾಗಿ ರಿಯಾಯಿತಿ ದರಗಳಲ್ಲಿ ನೀಡುವ ಧ್ವನಿವರ್ಧಕಗಳ ಬೆಲೆಯನ್ನು ರೂ 3480/- ಎಂದು ನಿರ್ಧರಿಸಲಾಗಿದೆ ಹರಿಜನ ವಾಡೆಗಳಲ್ಲಿರುವ ಎಸ್.ಟಿ , ಎಸ್ ಸಿ ದೇವಾಲಯಗಳಿಗೆ ಈ ದರ ರೂ 700/- ಆಗಿದ್ದು ಈ ದರಗಳು ಈಗ ಜಾರಿಯಲ್ಲಿವೆ

ಆಲಯಗಳಿಗಾಗಿ ಧ್ವನಿವರ್ಧಕಗಳನ್ನು ಬಯಸುವವರು ಸ್ಥಳೀಯ ಮುಜರಾಯಿ ಇಲಾಖಾ ಅಸಿಸ್ಟೆಂಟ್ ಕಮಿಷನರ್ ಅವರ ಮೂಲಕ ಅಭ್ಯರ್ಥನೆಗಳನ್ನು ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ ಇವರಿಗೆ ಕಳುಹಿಸಬೇಕು

**ತಿ.ತಿ ದೇ.**

### ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ - ತಿರುಮಲ

## ಅಷ್ಟದಳ ಪದ್ಮಾರಾಧನೆ

ತಿರುಮಲೆಯಲ್ಲಿ ಸ್ವಾಮಿಗೆ ಪ್ರತಿಮಂಗಳವಾರವೂ ಎರಡನೇ ಅರ್ಚನೆಯ ಸಮಯದಲ್ಲಿ ಅಷ್ಟೋತ್ತರನಾಮಗಳನ್ನು ಹೊಂದಿದ 108 ಬಂಗಾರದ ಪದ್ಮಪುಷ್ಪಗಳಿಂದ ಆರಾಧನೆ ನಡೆಸಲಾಗುತ್ತದೆ

ಈ ಅರ್ಚನೆಯ ಸಮಯದಲ್ಲಿ ರೂ 3,500/- ಶುಲ್ಕದಿಂದ ಗೃಹಸ್ಥರು ಪಾಲುಗೊಳ್ಳಬಹುದು ಅವರೊಂದಿಗೆ ಅವರ ಕಡೆಯ ಐದು ಮಂದಿ ಈ ಆರಾಧನೆಗೆ ಅನುಮತಿಸಲ್ಪಡುತ್ತಾರೆ

ಈ ಸೇವೆಯನ್ನು ಮಾಡಿಸುವ ಗೃಹಸ್ಥರಿಗೆ ಒಂದು ಶೇಷವಸ್ತ್ರ ಒಂದು ಕುಪ್ಪಸದ ಕಣ, ಹತ್ತು ದೊಡ್ಡ ಲಾಡು, ಹತ್ತು ವಡೆಗಳನ್ನು ಪ್ರಸಾದವಾಗಿ ನೀಡಲಾಗುವುದು

ಭಕ್ತರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿ ಮಾಡಲಾಗಿದೆ

**ತಿ. ತಿ. ದೇವಸ್ಥಾನಗಳು.**

'ಶ್ರುತಿ - ಸ್ಮೃತಿಗಳು ನನ್ನ ಆಜ್ಞೆಗಳೇನೇ' ಅವುಗಳ ಉಲ್ಲಂಘನೆ ಮಾಡುವವನು, ನನ್ನ ಆಜ್ಞೆಯನ್ನು ಉಲ್ಲಂಘಿಸಿದಂತೆಯೇ ಆಗುತ್ತದೆ, ಅಂತಹವನು ನನ್ನ ಶತ್ರುವಾಗುತ್ತಾನೆ ಅಂತಹವನು ನನ್ನ ಭಕ್ತನೂ ಅಲ್ಲ, ನಿಜ ಅರ್ಥದ ವೈಷ್ಣವನೂ ಆಗುವುದಿಲ್ಲ'

ಆದುದರಿಂದ ಶ್ರುತಿ - ಸ್ಮೃತಿಗಳಿಂದ ಪ್ರತಿಪಾದಿತವಾದ ಧರ್ಮವನ್ನು ಯಾವನು ಯಥಾವತ್ತಾಗಿ ಪಾಲಿಸುವನೊ, ಅವನೇ ನಿಜವಾದ ಶ್ರೀವೈಷ್ಣವನು ಅಂದರೆ ಅವನೇ ನಿಜವಾದ ದಾಸಭಕ್ತನು ಯಾರು ದರ್ಮಾತ್ಮನಾಗಬೇಕೆಂದಿರುವರೊ ಅವರಿಗೆ ಈ ಲಕ್ಷಣವಿರಲೇಬೇಕು ಇದು ಅತ್ಯಂತ ಆವಶ್ಯಕ ಶ್ರೀ ಮಹಾವಿಷ್ಣುವನ್ನು ಪ್ರತ್ಯಕ್ಷಗೊಳಿಸಿಕೊಂಡವರೂ ಕೂಡ, ಆ ನಂತರದಲ್ಲಿ ಆತನ ಆಜ್ಞೆಗಳನ್ನು ಅನುಸರಿಸಿ, ಅವುಗಳನ್ನು ಆಚರಣೆಯಲ್ಲಿ ತರಬೇಕು ಇದೇ ನಿಜವಾದ ದಾಸ್ಯಭಕ್ತಿ ಸ್ವಧರ್ಮ ಪರಿಪಾಲನೆಯನ್ನು ಭಕ್ತಿಪೂರ್ವಕವಾಗಿ ಆಚರಿಸಿದ್ದೇ ಆದರೆ ಚಿತ್ತಶುದ್ಧಿ ತಪ್ಪದೆ ಆಗುವುದು ಈ ಚಿತ್ತಶುದ್ಧಿಯಿಂದ ಜ್ಞಾನವು ಪ್ರಾಪ್ತವಾಗುತ್ತದೆ ಇದೇ ಶ್ರುತಿಗಳ ಸಿದ್ಧಾಂತವಾಗಿದೆ ಇದನ್ನೆ ಭಗವಾನ್ ಕೃಷ್ಣನು ಭಗವದ್ಗೀತೆಯಲ್ಲಿ 'ದಧಾಮಿ ಬುದ್ಧಿಯೋಗಂ ತಂ ಯೋಗ ಮಾಮುಪಯಾಂತಿ ತೇ' ಎಂಬುದಾಗಿ ಆಜ್ಞಾಪಿಸಿದ್ದಾನೆ

ಇದೆಲ್ಲದರ ಪರಿಣಾಮವಾಗಿ ಜ್ಞಾನಪ್ರಾಪ್ತಿಯ ಅಗತ್ಯವು ಉಂಟಾಗುತ್ತದೆ ಇದೇ ದಾಸ್ಯ ಭಕ್ತಿಯು ಸಖ್ಯ ಭಕ್ತಿಯ ಕಡೆ ವ್ಯಕ್ತಿಯನ್ನು ಕರೆದೊಯ್ಯುತ್ತದೆ

### ೮. ಸಖ್ಯ

ವಿಶ್ವಾಸೊ ಮಿತ್ರವೃತ್ತಿಶ್ಚ
ಸಖ್ಯಂ ದ್ವಿವಿಧಮೀರಿತಮ್

'ಭಗವಂತನಲ್ಲಿ ನಿಶ್ಚಲ ವಿಶ್ವಾಸ (ನಂಬಿಕೆ), ಅವನೊಂದಿಗೆ ಸ್ನೇಹಿತನಂತೆ ವರ್ತಿಸುವುದು - ಇವೆರಡನ್ನೂ ಸಖ್ಯವೆಂದೇ ಕರೆಯುತ್ತಾರೆ'

ಇವೆರಡರಲ್ಲಿ ವಿಶ್ವಾಸರೂಪದ ಸಖ್ಯಕ್ಕೆ ಮಹಾಭಾರತದಲ್ಲಿನ ಈ ಕೆಳಗೆ ಕಾಣಿಸಿರುವ ಶ್ಲೋಕವನ್ನು ಉದಾಹರಣೆಯಾಗಿ ಕೊಡಬಹುದು ದ್ರೌಪತಿಯು ಭಗವಾನ್ ಕೃಷ್ಣನೊಂದಿಗೆ ಈ ರೀತಿಯಲ್ಲಿ ಹೇಳುತ್ತಾಳೆ-

ಪ್ರತಿಜ್ಞಾ ತವ ಗೋವಿಂದ
ನ ಮೇ ಭಕ್ತಃ ಪ್ರಣಶ್ಯತಿ
ಇತಿ ಸಂಸ್ಮೃತ್ಯ ಸಂಸ್ಮೃತ್ಯ
ಪ್ರಾಣಾನ್ ಸಂಧಾರಯಾಮ್ಯಹಮ್

'ಹೇ ಗೋವಿಂದ' ನನ್ನ ಭಕ್ತರಿಗೆಂದೂ ನಾಶವಿಲ್ಲ - ಎಂದು ನೀನು ಹೇಳಿ ಪ್ರತಿಜ್ಞೆ ಮಾಡಿರುವೆ ಆ ನಿನ್ನ ಪ್ರತಿಜ್ಞೆಯನ್ನು ಸ್ಮರಿಸುತ್ತ, ಸ್ಮರಿಸುತ್ತ ನಾನು ಪ್ರಾಣಗಳನ್ನು ಧಾರಣೆ ಮಾಡಿಕೊಂಡಿದ್ದೇನೆ'

ಶ್ರೀಮದ್ಭಾಗವತದ ಏಕಾದಶ ಸ್ಕಂಧದಲ್ಲಿಯೂ ಕೂಡ ಇಂತಹುದೇ ವಿಶ್ವಾಸಾರ್ಹ ಭಕ್ತನ ಬಗ್ಗೆ ಹೇಳಿದೆ-

ತ್ರಿಭುವನ ವಿಭವಹೇತವೇಽಪ್ಯಕುಂಟ-
ಸ್ಮೃತಿ ರಜಿತಾತ್ಮಸುರಾದಿ ಭಿರ್ವಿಮೃಗ್ಯಾತ್
ನ ಚಲತಿ ಭಗವತ್ಪಾದಾರವಿಂದಾ-
ಲ್ಲವ ನಿಮಿಷಾರ್ಧಮಪಿ ಯಃ ಸವೈಷ್ಣವಾಗ್ರ್ಯಃ

'ಹೇ ರಾಜನ್' ಬ್ರಹ್ಮಾದಿ ದೇವಗಣಗಳು ಯಾವ ಶ್ರೀಹರಿ ಚರಣಗಳನ್ನು ಪ್ರತಿನಿತ್ಯ ಧ್ಯಾನಪೂರ್ವಕವಾಗಿ ಹುಡುಕಿದರೂ ಕೂಡ ದೊರೆಯುವುದಿಲ್ಲವೋ, ಅಂತಹವು ಸರ್ವೋತ್ತಮಸಾರವೆಂದು ನಿಶ್ಚಯಿಸಲಾಗಿದೆ ಇಂತಹುದು ದೊರೆತಾಗ ತ್ರಿಭುವನ ಸಾಮ್ರಾಜ್ಯ ವೈಭವವು ಸಿಕ್ಕದಾಗಲೂ ಕೂಡ ಅರ್ಧಗಳಿಗೆಯೂ ಅವುಗಳ ಧ್ಯಾನದಿಂದ ಬೇರೆಯಾಗುವುದಿಲ್ಲ, ದೂರವಾಗುವುದಿಲ್ಲ. ಅಂದರೆ ಅಂತಹ ಮಾನವನು ಶ್ರೀಹರಿಚರಣಗಳ ಸೇವೆಯನ್ನು ಮನಸ್ಸಿನಿಂದ ದೂರ ಮಾಡುವುದೇ ಇಲ್ಲ ಇಂತಹ ಮಾನವನೇ ವೈಷ್ಣವರಲ್ಲಿ ಶ್ರೇಷ್ಠನು'.

ಎರಡನೇ ರೀತಿಯ ಸಖ್ಯದ ಸಂಬಂಧದಲ್ಲಿ ಅಗಸ್ತ್ಯ ಸಂಹಿತೆಯಲ್ಲಿ ಹೀಗೆಂದು ಹೇಳಿದೆ-

ಪರಿಚರ್ಯಾಪರಾಃ ಕೇಚಿತ್-
ಪ್ರಾಸಾದೇಷು ಚ ಶೇರತೇ
ಮನುಷ್ಯಮಿವ ತಂ ದ್ರಷ್ಟುಂ
ವ್ಯವಹರ್ತುಂ ಚ ಬಂಧುವತ್

'ಪರಮಾತ್ಮನ ದರ್ಶನ ಮಾಡಬೇಕೆನ್ನುವವರು, ಅದಕ್ಕಾಗಿ ಹಾಗೂ ಆತನೊಂದಿಗೆ ಮಿತ್ರ ಸಮಾನ ವ್ಯವಹಾರ ಸಂಬಂಧವನ್ನು ಹೊಂದುವುದಕ್ಕಾಗಿ ಅನೇಕಾನೇಕ ಸೇವಾ ಪರಾಯಣ ಮಹಾತ್ಮರು ಪರಮಾತ್ಮನ ಮಂದಿರ (ಹೃದಯಮಂದಿರ)ದಲ್ಲಿ ತಪ್ಪದೆ ಶಯನಿಸುತ್ತಾರೆ'.

ಸಖ್ಯ ಭಕ್ತಿಯಲ್ಲಿ ಭಕ್ತನು ಭಗವಂತನೊಂದಿಗೆ ಸ್ನೇಹ (ಮಿತ್ರತ್ವ)ದ ಅಧಿಕಾರವನ್ನು ಪ್ರಕಟಪಡಿಸುತ್ತಾನೆ ಇದಕ್ಕೆ ಬಲಯುತವಾದ ಕಾರಣವೂ ಇರುತ್ತದೆ. ಪ್ರತಿಯೊಬ್ಬ ಭಕ್ತನಲ್ಲಿಯೂ ಸುಧಾಮನ ಸಮಾನವಾದ ಸಹಪಾಠಿಯಾಗುವ, ಗೋಪಿಯರ ಸಮಾನ ಆತನೊಂದಿಗೆ ಆಟವಾಡುವ ಹಾಗೂ ಅರ್ಜುನನ ಸಮಾನ ಸಹಚರರಾಗುವ ಪುಣ್ಯಾವಿಶೇಷವಿರುವುದಿಲ್ಲ. ಆದರೂ 'ದ್ವಾಸುಪರ್ಣಾ ಸಯುಜಾ ಸಖಾಯ' ಎನ್ನುವ ಶ್ರುತಿಯನುಸಾರ ಪರಮಾತ್ಮನೊಂದಿಗೆ ಜೀವಾತ್ಮದ ಮಿತ್ರತ್ವವಾಗುವ ಸಂಭವ ಇದ್ದೇ ಇರುತ್ತದೆ ಭಕ್ತ, ಭಗವಾನರ ನಡುವೆ ಈ ರೀತಿಯ ಸಚಿದಾನಂದರೂಪದ ಜೀವಾತ್ಮ - ಪರಮಾತ್ಮರ ಸಾದೃಶ್ಯಜ್ಞಾನದ ಜಾಗೃತಿಯನ್ನು ಉಂಟುಮಾಡಬಹುದು ಇದರಿಂದ ಅವನಲ್ಲಿ ಸಖ್ಯಭಕ್ತಿ ಉಂಟಾಗಬಹುದು ಈ ರೀತಿಯ ಭಕ್ತಿಯಲ್ಲಿ ವೇದಾಂತವು ಸೇರಿಹೋಗುತ್ತದೆ ಅಂತೆಯೇ ಈ ಭಕ್ತಿಯು ಜ್ಞಾನಮಿಶ್ರಿತವಾದುದಾಗುತ್ತದೆ. ಶ್ರವಣದಿಂದ ಹಿಡಿದು ದಾಸ್ಯಪರ್ಯಂತ ಭಕ್ತಿಯಲ್ಲಿ ಜೀವಾತ್ಮಾ ಹಾಗೂ ಪರಮಾತ್ಮರ ನಡುವೆ ಸಾದೃಶ್ಯದ ಜ್ಞಾನ ಇಲ್ಲದೇ ಹೋಗಬಹುದು ಆದರೆ ಸಖ್ಯಭಾವದ ಭಕ್ತಿಯಲ್ಲಿ ಆ ಜ್ಞಾನವು ಇರಲೇಬೇಕಾಗುತ್ತದೆ ಈ ರೀತಿಯಾದ ವೇದಾಂತಜ್ಞಾನವು ಇದುವರೆವಿಗೂ ಏಕದೇಶೀಯವಾಗಿರುವುದು ಇದರ ಪೂರ್ಣಜ್ಞಾನವು ಅದ್ವೈತ ಜ್ಞಾನವಾಗಿರುತ್ತದೆ ನಿಧಾನ ನಿಧಾನವಾಗಿ ಪರಮಾತ್ಮನು ಅದನ್ನೂ ಭಕ್ತನಲ್ಲಿ ಪ್ರಕಟಗೊಳಿಸುವನು ಆ ಜ್ಞಾನವು ಆತ್ಮನಿವೇದನವೆನ್ನುವ ಹೆಸರಿನ ಅಂತಿಮ ಭಕ್ತಿಯಲ್ಲಿ ನೋಡಬಹುದು ಯಾವ ಜ್ಞಾನದಿಂದ ಪರಾಭಕ್ತಿ ಪ್ರಾಪ್ತವಾಗುತ್ತದೆಯೊ, ಅದೇ ಈ ಸಖ್ಯ ಜ್ಞಾನವಾಗಿರುತ್ತದೆ ಈ ಪರಾಭಕ್ತಿಯ ಮುಖಾಂತರ ಭಗವಂತನ 'ಯಾವಾನ್ ಯಶ್ಚಾಸ್ಮಿ ತತ್ತ್ವತಃ' ಎನ್ನುವ ಹೇಳಿಕೆಯ ಅನುಸಾರ ಯಾವ ಜ್ಞಾನವು ಪ್ರಾಪ್ತವಾಗುತ್ತದೆಯೊ, ಅದನ್ನೇ ಆತ್ಮನಿವೇದನ ಭಕ್ತಿಯಲ್ಲಿ ಕಾಣುತ್ತೇವೆ

## ೯. ಆತ್ಮನಿವೇದನೆ

ಶ್ರೀಮದ್ಭಾಗವತದ ಏಕಾದಶ ಸ್ಕಂಧದಲ್ಲಿ-

ಮರ್ತ್ಯೋ ಯದಾ ತ್ಯಕ್ತ ಸಮಸ್ತ ಕರ್ಮಾ
ನಿವೇದಿತಾತ್ಮಾ ವಿಚಿಕೀರ್ಷಿತೋ ಮೇ
ಸದಾ ಮೃತತ್ವಂ ಪ್ರತಿಪದ್ಯಮಾನೋ
ಮಯಾತ್ಮ ಭೂಯಾಯ ಚ ಕಲ್ಪತೇ ವೈ
೨೯/೩೪

ಎಂಬ ಶ್ಲೋಕದ ಹೇಳಿಕೆ ಇದೆ ಇದರ ಪ್ರಕಾರ-

'ಮಾನವನು ಎಲ್ಲ ಕರ್ಮಗಳನ್ನೂ ತ್ಯಜಿಸಿ ಯಾವಾಗ ನನ್ನಲ್ಲಿ ಆತ್ಮಸಮರ್ಪಣೆ ಮಾಡಿಕೊಂಡು, ನನ್ನಲ್ಲಿಯೇ ಆರಾಧನೆಯ ಇಚ್ಛೆಯಿಂದ ಎಲ್ಲ ಕಾರ್ಯಗಳನ್ನೂ ಮಾಡುವನೊ, ಆಗ ಅವನು ಜೀವನ್ಮುಕ್ತವಾಗಿ ನನ್ನ ಸದೃಶ ಐಶ್ವರ್ಯದ ಅಧಿಕಾರಿಯಾಗುವನು'

'ಆತ್ಮನಿವೇದನ'ದ ಪದದಲ್ಲಿ ವಿದ್ವಾಂಸರು ಆತ್ಮದ ಎರಡು ಅರ್ಥಗಳನ್ನು ನೀಡಿರುವರು ೧ ಅಹಂಭಾವವನ್ನು ಹೊಂದಿರುವ ದೇಹದಲ್ಲಿನ ಜೀವಾತ್ಮನು, ೨ ಮಮಕಾರಕ್ಕೆ ಆಸ್ಪದ ಕೊಟ್ಟಿರುವ ದೇಹವನ್ನು ಹೊಂದಿರುವವನು

ಜೀವಾತ್ಮವು ನಿವೇದನ ಮಾಡಿಕೊಳ್ಳುವ ವಿಷಯದಲ್ಲಿ ಯಾಮುನಾಚಾರ್ಯರು ತಮ್ಮ 'ಆಳವಂದಾರ್ ಸ್ತೋತ್ರ'ದಲ್ಲಿ ಮಾಡಿರುವ ನಿವೇದನೆಯು ಅರ್ಥಪೂರ್ಣವಾದುದು-

ವಪುರಾದಿಷು ಯೋಽಪಿ ಕೋಽಪಿ ವಾ
ಗುಣತೋಽಸಾನಿ ಯಥಾ ತಥಾವಿಧಃ
ತದಯಂ ತವ ಪಾದ ಪದ್ಮಯೋ-
ರಹಮದ್ಯೈವ ಮಯಾ ಸಮರ್ಪಿತಃ

'ಹೇ ಪರಮಾತ್ಮ! ಈ ನನ್ನ ಶರೀರದಲ್ಲಿರುವ ನಾನು ಯಾರೇ ಆಗಿರಲಿ, ನನ್ನಲ್ಲಿನ ಗುಣಗಳು ಎಂತಹವೇ ಆಗಿರಲಿ, ಹೇಗ್ಹೇಗೆ ಇರುವೆನೊ ಹಾಗೆಯೇ ನನ್ನನ್ನು ನಾನು ನಿನಗೆ, ನಿನ್ನ ಚರಣ ಕಮಲಗಳಲ್ಲಿ ಅರ್ಪಣೆ ಮಾಡುತ್ತಿದ್ದೇನೆ'

ಇದು ಆತ್ಮನಿವೇದನೆಯ ಅತ್ಯಂತ ಸೂಕ್ತ ಉದಾಹರಣೆ.

ದೇಹರೂಪ ಆತ್ಮದ ಸಂಪೂರ್ಣ ನಿವೇದನವನ್ನು 'ಭಕ್ತಿವಿವೇಕ' ಎನ್ನುವ ಗ್ರಂಥ ಅನುಸಾರ ಈ ರೀತಿಯಲ್ಲಿ ವರ್ಣಿಸಲಾಗಿದೆ-

ಚಿಂತಾಂ ಕುರ್ಯಾನ್ನ ರಕ್ಷಾಯೈ
ವಿಕ್ರೀತಸ್ಯ ಯಥಾ ಪಶೋಃ
ತಥಾರ್ಪಯನ್ ಹರೌ ದೇಹಂ
ವಿರಮೋದಸ್ಯ ರಕ್ಷಣಾತ್

'ಮಾರಿದ ಪಶುವಿನ ರಕ್ಷಣೆಗಾಗಿ ಯಾವ ರೀತಿಯಲ್ಲಿ ಯೋಚನೆ ಮಾಡಬೇಕಾಗಿಲ್ಲವೋ, ಅದೇ ರೀತಿಯಲ್ಲಿ ಶ್ರೀಹರಿಯ ಚರಣಗಳಲ್ಲಿ ದೇಹವನ್ನು ಸಮರ್ಪಿಸಿರುವ ಮಾನವನು ಆ ದೇಹದ ರಕ್ಷಣೆಯ ಬಗ್ಗೆ ಚಿಂತಿಸುವುದನ್ನು ಬಿಡಬೇಕು

ಇದುವರೆವಿಗೂ ತಿಳಿಸಿದ ನವಧಾ (ನವವಿಧ) ಭಕ್ತಿಗಳಲ್ಲಿ ಮಾನವನಿಗೆ ಯಾವ ಭಕ್ತಿ ಒಳ್ಳೆಯದೆಂದು ಕಾಣುತ್ತದೆಯೊ ಅದನ್ನು ಅನುಸರಿಸುವುದು ಉತ್ತಮ. ಅದೇ 'ಭವಭಯ ಹಾರಿಣೀ, ಹರಿವಶಕಾರಿಣೀ ಭಕ್ತಿ' ಭಕ್ತಿಯ ಸ್ವರೂಪವನ್ನು ಪಡೆದು, ಆ ಭಕ್ತಿಯ ಅನುಷ್ಠಾನದಿಂದ ಅವನು ಮೋಕ್ಷವನ್ನು ಪಡೆಯುವನು

(ಸಾಧಾರ)

# ತಿರುವಾಯ್ಮೊಳಿಯಲ್ಲಿ ನಾಯಿಕಾಭಾವ

- ಎಂ. ಆರ್. ನರಸಿಂಹನ್.

ಭಾಗ - ೫

(ಮುಂದುವರೆದಿದೆ)

26. ನವಮ ಶತಕ - ಪಂಚಮದಶಕ : ಈ ದಶಕದಲ್ಲಿ ನಾಯಕಿಯು ಸಂತೋಷವಾಗಿ ವಿಹಾರ ನಡೆಸುತ್ತಿರುವ ಪಕ್ಷಿ ಮುಂತಾದವುಗಳನ್ನು ಕಂಡು ತನ್ನ ವಿಶೇಷ ಬಾಧೆ ಅಧಿಕಗೊಳ್ಳಲು ಅವುಗಳ ಮೇಲೆ ಅಸೂಯೆ ತಾಳುತ್ತಾಳೆ "ಎಲೈ ಕೋಗಿಲೆಗಳೇ ನೀವು ಸಂಶ್ಲೇಷೆಯ ಸುಖದಿಂದ ಸುಸ್ವರ ಗಾಯನ ಹೊಮ್ಮಿಸಿದರೆ, ನನಗೆ ಪ್ರಾಣಬಾಧೆಯುಂಟಾಗುತ್ತದೆ. ನೀವೋ ಕೃಷ್ಣಸ್ವಾಮಿಗೆ ದೌತ್ಯವನ್ನಟ್ಟಿದರೆ ಅದನ್ನು ಸರಿಯಾಗಿ ನಿರ್ವಹಿಸದೆ ಈಗ ನನ್ನ ಮುಂದೆಯೇ ಈ ಆಡಂಬರ ಮಾಡುತ್ತಿರುವಿರಿ ದಯವಿಟ್ಟು ನನ್ನ ಮನಸ್ಸನ್ನು ಮತ್ತಷ್ಟು ಸಂಕಟಪಡಿಸದೇಡಿರಿ ಎಲೈ ಅನ್ರಿಲ್‌ಪಕ್ಷಿಗಳೇ! ನಾಯಕನೊಡನೆ ಸೇರಿ ಸಂತೋಷವಾಗಿ ಕೂಗುತ್ತಿರುವಿರಿ. ಗೋವಿಂದನು ಯಾರಿಗೂ ಹಿತವನ್ನುಂಟು ಮಾಡುವ ವ್ಯಕ್ತಿಯಲ್ಲ ಹೀಗಾಗಿ ನನ್ನ ಪ್ರಾಣ ಇನ್ನು ಅವನ ಕೈಯಲ್ಲೇ ಸೇರಿರುತ್ತದೆ ಎಲೈ ಅನ್ರಿಲ್ ಪಕ್ಷಿಗಳೇ! ನೀವೋ ನಿಮ್ಮ ಪ್ರಿಯನೊಡನೆ ಸೇರಿ ಸುಸ್ವರವನ್ನು ಹೊರಡಿಸುತ್ತಿರುವಿರಿ ಆದರೆ ಪಾಪಿಯಾದ ನನಗೆ ಸಂತೋಷಿಸುವ ಭಾಗ್ಯವಿಲ್ಲ ನನ್ನ ಪ್ರಾಣ ಅವನಲ್ಲಿಯೇ ಸೇರಿದ್ದರೂ ಕೂಡ ಈ ಪಾಪಿಯಾದ ಕಿವಿಗಳು ನಿಮ್ಮ ಸಂತೋಷದ ಶಬ್ದವನ್ನು ಕೇಳುತ್ತ ಹೀಗೆ ನನ್ನ ಪ್ರಾಣವನ್ನು ಇನ್ನೂ ದೇಹದಲ್ಲಿಯೇ ನಿಲ್ಲಿಸಿರುವುದೋ ಈ ಉಭಯ ಸಂಕಟ ಸ್ಥಿತಿಯನ್ನು ಆತ ನನಗೇಕೆ ಉಂಟುಮಾಡಬೇಕು ನೀವು ನಿಮ್ಮನಾಯಕನೊಡನೆ ಸೇರಿ ಆನಂದವಾದ ಶಬ್ದ ಹೊರಡಿಸುತ್ತಿರುವುದು ನನಗೆ ತ್ರಾಸವನ್ನುಂಟು ಮಾಡುತ್ತಿದೆ ನನ್ನ ಮನೋವಾಕ್ಕಾಯಗಳು ಆತನಲ್ಲಿಯೇ ಲೀನವಾಗಿದ್ದರೂ ಕೂಡ ಶರೀರ ಪ್ರಾಣಗಳು ಇಲ್ಲಿಯೇ ನಿಂತು ತೊಳಲಾಡುತ್ತಿವೆ ಎಲೈ! ಲೀಲೆಯಲ್ಲಿ ಮಗ್ನವಾಗಿರುವ ಪೂವೈ ಪಕ್ಷಿಗಳೇ! ಮನಸ್ಸಿಗೆ ಬಂದ ಹಾಗೆ ಕೂಗುತ್ತ ನನ್ನನ್ನು ದುಃಖಿಯನ್ನಾಗಿ ಮಾಡಬೇಡಿರಿ ಆ ಲಕ್ಷ್ಮೀಧರನು ನನ್ನ ಪ್ರಾಣಗಳನ್ನು ತಿನ್ನಲು ಏಕೆ ಮತ್ತು ಹೇಗೆ ಮನಸ್ಸು ಮಾಡಿರುವನೊ ಗೊತ್ತಾಗಲಿಲ್ಲವಲ್ಲ ಎಲೈ ಗಿಳಿಯ ಮರಿಯೆ! ನನ್ನ ಪ್ರಾಣ ಸದೃಶನಾದ ಕಾಕುಸ್ಥನು ನಿನ್ನ ಬಾಯಿಗೆ ಸಮನಾದ ಕೆಂಪು ವಕ್ತ್ರನೇತ್ರ ಹಸ್ತ ಪಾದಗಳನ್ನು ಹೊಂದಿರುವನು-ನಿನ್ನಂತೆಯೇ ಶ್ಯಾಮಲ ವರ್ಣ (ನಿನ್ನದು ಹಸಿರುಬಣ್ಣ, ಅವನೂ ಮರಕತ ವರ್ಣದವನು) ಆತ ನನ್ನೊಡನೆ ಸಂಸರ್ಗ ಮಾಡಿ ಹೊರಟುಹೋದ ಆದರೆ ಅವನ ಬಣ್ಣದ ಸೂಬಗನ್ನು ಪಡೆದ ನಿನ್ನನ್ನು ನೋಡಿ ನಾನು ಸ್ವಲ್ಪ ಸಮಾಧಾನ ಪಡುತ್ತಿದ್ದೆ (ವರ್ಣ ಸಾದೃಶ್ಯದಿಂದ) ಆದರೆ ನೀನೋ ಮಧುರ ಗಾನ ಹೊರಡಿಸಿ ನನ್ನ ಭಗ್ನ ಮನಸ್ಸಿಗೆ ನೋವು ಹೆಚ್ಚಾಗುವಂತಾಗಿಸಿದೆಯಲ್ಲ ದೇಡ, ಶಬ್ದಮಾಡದೆ ಸುಮ್ಮನೆ ಕೂರು ನನ್ನೊಡನೆ ರಮಿಸಿಹೋದ ಆ ಪುಂಡರೀಕಾಕ್ಷನೂ ಮಾಯಾಮಯನೂ ಆದ ಕೃಷ್ಣನಂತೆ ನೀವು ಕಂಗೊಳಿಸುವಿರಲ್ಲ ಎಲೈ ಮೇಘಗಳೇ! ನಿಮ್ಮನ್ನು ನೋಡಿದಾಗ ಆತನ ನೆನಪೇ ಮರುಕಳಿಸಿ ನನಗೆ ಪ್ರಾಣವೇ ಹೋಗುತ್ತಿದೆ ಆದ್ದರಿಂದ ನೀವು ನನ್ನ ಕಣ್ಣಿಗೆ ಬೀಳದೆ ಎಲ್ಲಿಯಾದರೂ ಸಾಗಿ ಹೋಗಿ ಎಲೈ ಕೋಗಿಲೆ ಮರಿಗಳೆ, ನಿಮಗೆ ಹಾಲುಹಣ್ಣು ಕೊಟ್ಟು ಮಾತು ಕಲಿಸಿದೆನಲ್ಲ, ಅದನ್ನು ಸಾರ್ಥಕ ಪಡಿಸಿ ನನ್ನ ಹೊಟ್ಟೆಗೆ ಹಾಲು ಹೊಯ್ದಿರಿ ಆ ಕೃಷ್ಣನ ಮಧುರವಾದ ನಾಮಧೇಯಗಳನ್ನು ಅಂದು ನಿಮಗೆ ನಾನು ಕಲಿಸಿಕೊಟ್ಟದ್ದನ್ನು ಈಗ ನೀವು ಹೇಳುತ್ತಿದ್ದರೆ ನನಗೆ ನನ್ನ ಪ್ರಾಣಕ್ಕೆ ಯಮನೋಪಾದಿ ಆಗುವುದೆಂಬುದನ್ನು ನೀವು ಕಂಡುಕೊಳ್ಳದೇಡವೇ? ನೀವೆಂತಹ ಒಳ್ಳೆಯವರು ಎಲೈ ಗಾನಗೈಯುವ ದುಂಬಿಗಳಿರಾ! ನನ್ನ ಮನಸ್ಸು ಮೊದಲೇ ಹುಣ್ಣಾಗಿದೆ ಶೀತಲವಾದ ತಟಾಕದಲ್ಲಿ ವಿಕಸಿತವಾದ ಕಮಲಗಳು ಹೇಗೆ ರಂಜಿಸುವುದೋ ಹಾಗೆಯೇ ವಿಶಾಲ ನೇತ್ರದವನಾದ ಕೃಷ್ಣನು ನನ್ನ ಪ್ರಾಣಗಳನ್ನು ಆಗಲೇ ಸೆಳೆದೊಯ್ದಿರುವನು ಈಗ ನಿಮ್ಮ ಗಾಯನ ಹುಣ್ಣಿನ ಮೇಲೆ ಶಸ್ತ್ರ ಪ್ರಯೋಗ ಮಾಡಿದಂತೆ ಬಾಧೆಯನ್ನುಂಟು ಮಾಡುತ್ತಿರುವುದು,ದಯವಿಟ್ಟು ಸುಮ್ಮನಾಗಿ ಎಲೈ ನಾರೈ ಪಕ್ಷಿಗಳಿರಾ, ನಾವೀಗ ಅಪೇಕ್ಷೆ ಪಟ್ಟಂತೆ ಪರಮಪದ ನಾಥನನ್ನು ಸೇರಿದ್ದಾಯಿತು ಇನ್ನು ಯಾವ ವಿಚಾರವೂ ಇಲ್ಲ ಅವನ ದೇಹಕ್ಕೆ ಆಭರಣದಂತಿರುವ ನನ್ನ ಶರೀರವು ಶಿಥಿಲವಾಗಿರುವುದನ್ನು ಕುರಿತು ನಾನಿನ್ನೇಕೆ ಯೋಚಿಸದೇಕು ಅದು ಅವನ ಸಂಸರ್ಗದಿಂದ ಶ್ಲಾಘ್ಯಸುಖವನ್ನು ಹೊಂದಲೆಂದಷ್ಟೇ ಹಾರೈಸುತ್ತೇನೆ ಇನ್ನು ಮೇಲೆ ಎಲ್ಲೆಲ್ಲೂ ಸಂತಸವೇ ಕಾಣಲಿ (ತನಗೆ ಸೌಖ್ಯವುಂಟಾದರೆ ಎಲ್ಲ ವಸ್ತುವೂ ಆನಂದಮಯವಾಗಿ ತಾನೇ ಕಾಣದೇಕಾಗಿರುವುದು ಅದು ನ್ಯಾಯವೇ ಸರಿ.)

27. ನವಮ ಶತಕ-ಸಪ್ತಮ ದಶಕ: ನಾಯಕಿಯು ಮತ್ತೆ ತಿರುಮಾಳಿಕ್ಕಳಂನಲ್ಲಿನ ಸ್ವಾಮಿಯೊಡನೆ ಸಮಾಗಮಕ್ಕಾಗಿ ಪಕ್ಷಿ ಸಂದೇಶವನ್ನು ಕಳುಹಿಸುತ್ತಾಳೆ

ಎಲೈ ಸಮುದ್ರದಲ್ಲಿ ಆಹಾರ ಹುಡುಕಿ ಹಾರಾಡುವ ನಾರಾಯಣಪಕ್ಷಿಯೇ! ತುಲಸೀ ಮಾಲಾಲಂಕೃತ ಕುಂಭ ನರ್ತನ ಪ್ರಿಯನಾದ ತಿರುಮಾಳಿಕ್ಕಳಂ ಸ್ವಾಮಿಗೆ ನನ್ನ ಅಹವಾಲನ್ನು ಹೇಳಿ ಬನ್ನಿರಿ ನಿಮ್ಮ ಪಾದಗಳು ನನಗೆ ಶಿರೋಧಾರ್ಯವಾಗಲಿ ಎಲೈ, ನೀವು ನಿಮ್ಮ ಬಂಧುಗಳಿಂದ ಯಾವಾಗಲೂ ಕೂಡಿಯೇ ಇರುವಿರಿ ಹಾಗೆಯೇ ನಿಮ್ಮ ನಾಯಕಿಯರೂ ಸಂಗಡವೇ ಇರುತ್ತಾರೆ ಇಂತಹ ಸಮೃದ್ಧ ಬಾಳಿನ ಕುರುಕು ಪಕ್ಷಿಗಳೇ ನನ್ನನ್ನು ನೋಡಿ,



ತಿರುಮಾಳಿಕ್ಕಳಂ ಸ್ವಾಮಿಯಿಂದಲೂ ಅನಾದರಿಸಲ್ಪಟ್ಟಿದ್ದೇನೆ ಬಂಧುಗಳೂ ನಿಂದಿಸಿ ದೂರವಿರಿಸಿದ್ದಾರೆ ಈ ಅವಸ್ಥೆಯಲ್ಲಿ ನಾನಿಲ್ಲಿ ಇರುವುದಾದರೂ ಹೇಗೆ ಎಂದು ಆ ಸ್ವಾಮಿಯಲ್ಲಿ ಕೇಳಿ ವಿಶಾಲ ತಟಾಕಗಳಲ್ಲಿಯೇ ವಾಸಿಸುವ ಬಕಪಕ್ಷಿಗಳೇ! ತಿರುಮಾಳಿಕ್ಕಳಂನಲ್ಲಿ ವಾಸವಾಗಿರುವ ಸ್ವಾಮಿಗೆ ಪಾಪಿಯಾದ ನಾನು ದೂತರನ್ನು ಅಟ್ಟಿರುವೆನೆಂದು ತಿಳಿಸಿ "ಅವಳಿಗೆನಿಮ್ಮದಿವ್ಯಮಂಗಳ ವಿಗ್ರಹಲಾಭವುಂಟಾಗುವಂತೆ ಮಾಡು" ಎಂದು ಬಿನ್ನವಿಸಿರಿ ಈ ನಿಮ್ಮ ಹಿರಿಯ ಕಾರ್ಯದಿಂದಾಗಿ ಎಂದೆಂದೂ ನಿಮಗೆ ಆಕಾಶವಾಸ ಲಭಿಸುತ್ತದೆ (ಎಂದರೆ ನಿಮಗೆ ಪರಮಾತ್ಮನ ನಿತ್ಯಸಾನ್ನಿಧ್ಯವೆಂಬುದು ಖಂಡಿತ) ಆಕಾಶದಲ್ಲಿ ತ್ವರೆಯಾಗಿ ಸಂಚರಿಸಿ, ಮಿಂಚಿನ ಗೊಂಚಲನ್ನು ಸಂಚಲಿಸಿ ಸಾಗುವ ಮೇಘಗಳೇ! ತಿರುಮಾಳಿಕ್ಕಳಂ ನ ಗುಣೋಜ್ವಲ ಸ್ವಾಮಿ ಪರಮಪದದಲ್ಲಿ ಆಲಯ ಮಾಡಿಕೊಂಡಿದ್ದರೂ, ಈ ಪಾಪಿಯ ಮನದಲ್ಲಿ ನೆಲೆಗೊಂಡಿರುವುದನ್ನು ಜ್ಞಾಪಕ ಪಡಿಸಿ "ನಮ್ಮಕ್ಲೇಶ ನಾಶಪಡಿಸುವುದರಿಂದ ಅಲ್ಲವೇ ಅವನ ಕೇಶವ ನಾಮ ಸಾರ್ಥಕವಾಗುವುದು" ಎಂಬುದನ್ನು ನೆನಪಿಗೆ ತನ್ನಿರಿ ಎಲೈ ಭ್ರಮರಗಳೇ! ನಿಮಗೆ ಪುಷ್ಪಗಳಿಂದ ಸಮೃದ್ಧವಾದ ಮಧುವು ಸಿಗುವ ಸ್ಥಾನ ತಿರುಮಾಳಿಕ್ಕಳಂ ದಿವ್ಯಕ್ಷೇತ್ರ. ಅಲ್ಲಿಯ ಲಕ್ಷ್ಮೀಲೋಲನಾದ ಸ್ವಾಮಿಗೆ ನೀವು ದೂತವಾಕ್ಯವನ್ನು ಒಯ್ಯುವ ಪಕ್ಷದಲ್ಲಿ ನನ್ನ ಈ ಹೀನಸ್ಥಿತಿಯನ್ನು ಕೈಬಳೆಗಳೂ, ವಸ್ತ್ರಗಳೂ ಶಿದಿಲವಾಗಿರುವುದನ್ನು ತಿಳಿಸಿರಿ ಎಲೈಕುರುಕು ಪಕ್ಷಿಗಳೇ ತಿರುಮಾಳಿಕ್ಕಳಂ ಸ್ವಾಮಿಯು ನನ್ನ ವಸ್ತ್ರ ಬಳೆಗಳನ್ನು ಸ್ವೀಕರಿಸಿದ್ದು ಸರಿ ಆದರೆ ನನ್ನ ತೋಳುಗಳನ್ನು ಮಾತ್ರ ಬಿಟ್ಟು ಹೋದನಲ್ಲ ಅದು ಏಕೆಂದು ಆ ಸ್ವಾಮಿಯನ್ನು ವಿಚಾರಿಸಿ, ಭೃಂಗ ಭೃಂಗಿಗಳೇ! ನೀವು ವಿಹರಿಸುತ್ತಿದ್ದೀರಿ ನೀವೇಕೆ ತಿರುಮಾಳಿಕ್ಕಳಂ ಸ್ವಾಮಿಯಲ್ಲಿ ಒಂದು ಬಿನ್ನಪ ಮಾಡಬಾರದು ನನ್ನ ಹಾರಗಳನ್ನು ಧರಿಸಿದ ಹೃದಯ ಬಣ್ಣಗೆಟ್ಟಿದೆ ನನ್ನ ಎರಡು ಕಣ್ಣುಗಳೂ ನೀರಿನಿಂದ ತುಂಬಿವೆ ಈ ಸ್ಥಿತಿಯನ್ನು ತಿಳಿದೂ ನನ್ನನ್ನು ದೂರವಿರಿಸುವುದು ತರವಲ್ಲವೆಂದು ಅವನಲ್ಲಿ ತಿಳಿಸಿರಿ ಮಂದಗಮನದ ಹಂಸಪಕ್ಷಿಗಳೇ ನನ್ನನ್ನು ಶಿಥಿಲಮಾಡಿದವನಲ್ಲ ತಿರುಮಾಳಿಕ್ಕಳಂ ಸ್ವಾಮಿ, ನನ್ನ ಅಂತರಂಗವನ್ನು ಮಾತ್ರ ಶಿಥಿಲವಾಗದಂತೆ ಇಟ್ಟಿರುವನಲ್ಲ ಇದು ಯುಕ್ತವೇ ಎಂದು ಕೇಳಿರಿ

28 ನವಮ ಶತಕ - ನವಮ ದಶಕ ಭಗವತ್ ಸೃಷ್ಟಿ ವ್ಯಾಪಾರಗಳಲ್ಲಿ ನಾಯಕಿ ತನ್ನ ವಿಶ್ಲೇಷೆಯ ಬಾಧೆಯನ್ನು ಉತ್ತೇಜಿಸುವ ವೈಪರೀತ್ಯವನ್ನು ಕಂಡು ಗೋಳಾಡುತ್ತಾಳೆ

ಮಲ್ಲಿಗೆಯ ಪರಿಮಳವುಳ್ಳ ಗಾಳಿಯ ನನಗೆ ತಾಪವನ್ನು ನೀಡುತ್ತಿದೆ ಕುರಿಂಜಿಯೆಂಬ ಸುಂದರಗಾನ ಕೇಳಿ ಮನಃಕ್ಷೋಭೆಯುಂಟಾಗುತ್ತಿದೆ ಅಸ್ತಮಿಸುವ ಈ ಸೂರ್ಯನ ಸೊಬಗು ಮೋಹವನ್ನು ವರ್ಧಿಸಿ ಸಂಧ್ಯಾಮೇಘಗಳು ಶರೀರವನ್ನು ಘಾಸಿಗೊಳಿಸುತ್ತಿವೆ ಪರಮಾತ್ಮನು ಸಂಶ್ಲೇಷಿಸಿದ ಈ ದೇಹವನ್ನು ಹೊತ್ತುಕೊಂಡು ಈ ವಿರಹಾವಸ್ಥೆಯಲ್ಲಿ ಎಲ್ಲಿ ನಿಲ್ಲುವುದು, ಎಲ್ಲಿಗೆ ಹೋಗುವುದು, ಹೇಗೆ ಶಾಂತಿಯನ್ನು ಹೊಂದುವುದು, ವೃಷಬದ ಕಂಠದಲ್ಲಿ ತೂಗುವ ಗಂಟೆಯ ಶಬ್ದ, ಮಂದಮಾರುತ, ಎಲೆಗಳ ಜರ್ಝರ ಶಬ್ದ, ಸಾಯಂಕಾಲದ ಸುಗಂಧ ತುಂಬಿದ ವಾತಾವರಣ ನನಗೆ ಸೌಖ್ಯ ನೀಡುತ್ತಿಲ್ಲ ಈ ಪ್ರಪಂಚವನ್ನು ಸೃಷ್ಟಿಸಿ, ಉಂಡು, ಉಗಿದು, ಅಳೆದು ಉದ್ಧರಿಸಿದ ಶ್ರೀಕೃಷ್ಣ ನನ್ನನ್ನು ಕಾಪಾಡಲು ಮುಂದೆ ಬರುತ್ತಿಲ್ಲವಲ್ಲ ನನ್ನ ದೇಹದ ಅವಯವಗಳೆಲ್ಲ ಆತನ ಸಂಶ್ಲೇಷೆಯ ನಂತರವೇ ಈ ವಿಶ್ಲೇಷೆಯ ಬಾಧೆಯಿಂದ ದೆಂದು ಸೊರಗಿಹೋಗಿದೆ

ಅವನ ರೂಪವೇ ಕಣ್ಣಲ್ಲಿ ನಿಂತಿದೆ ನಾನು ಪಾಪಿ, ಶೀತವಾದ ಗಾಳಿಕೂಡ ನನ್ನನ್ನು ದಹಿಸುತ್ತಿದೆ ಮೃದುವಾದ ಪುಷ್ಪಶಯನವೂ ನನಗೆ ದೇಗೆಯನ್ನುಂಟುಮಾಡುತ್ತಿವೆ ಸುಂದರವಾದ ರೆಕ್ಕೆಯನ್ನುಳ್ಳ ಗರುಡನನ್ನು ವಾಹನ ಮಾಡಿಕೊಂಡ ಆ ಪರದೈವವೆಂಬ ಭ್ರಮರವು ನನ್ನ ಸ್ತ್ರೀತ್ವವೆಂಬ ಪುಷ್ಪದ ಭೋಗ ಹೊಂದುತ್ತಿರುವಾಗ ಆ ಸಂಶ್ಲೇಷೆಯ ಆನಂದ ತಡೆದುಕೊಳ್ಳಲಾಗಲಿಲ್ಲ ಈಗ ಸಾಯಂಕಾಲವಾಗಿ ಪಶುಗಳೂ ಮನೆಗಳಿಗೆ ಹಿಂದಿರುಗುತ್ತಿವೆ ಆದರೆ ಆ ಕೃಷ್ಣನ ಸುಳಿವೇ ಇಲ್ಲವಲ್ಲ ಆತನ ಕೊಳಲಿನ ಗಾನವೂ ಕೇಳುತ್ತಿಲ್ಲ ನನ್ನ ಆಪ್ತ ಸಖೀಜನರೇ ಅವನಿಗೆ ವಶವಾಗಿ ಬಿಟ್ಟರೋ ಏನೊ! ನನ್ನ ಮೇಲೆ ಆತನ ಕೃಪೆ ಬೀಳಲೇ ಇಲ್ಲವಲ್ಲ ಆತ್ಮವಸ್ತು ಈ ರೀತಿ ರಕ್ಷಣೆಯಿಂದ ವಂಚಿತವಾಗಿರುವುದಲ್ಲ ಅವನು ಮತ್ತೆ ನನ್ನನ್ನು ಸ್ವೀಕರಿಸಿದರೆ ಆ ಉಪಕಾರಕ್ಕಿಂತ ಹಿರಿದಾದದ್ದು ಮತ್ತೇನು? ಸಂಧ್ಯೆಯು ಹಗಲನ್ನು ನಾಶಪಡಿಸುತ್ತಿದೆ ಮನಸ್ಸೂ ನನಗೆ ವಿರುದ್ಧವಾಗಿ ಕಾಡುತ್ತಿದೆ ದೇವಾದಿಗಳಿಂದ ಆಶ್ರಯಿಸಲ್ಪಟ್ಟ ಆತನ ದಿವ್ಯ ಮೂರ್ತಿಯು ನನ್ನ ಪ್ರಾಣವನ್ನೇ ಶೋಷಿಸುತ್ತಿದೆ, ನನಗೆ ಆಶ್ರಯ ನೀಡುವ ಸ್ಥಾನ ಮತ್ತೇನಿದೆ, ನನ್ನ ಮನಸ್ಸು ಅವನಲ್ಲಿ ಸೇರಿಹೋಗಿದೆ

ಆವರಿಸಿರುವಂತಹ ಗಂಧದ ಹೊಗೆ, ವೀಣಾನಾದ, ಪಂಚಮರಾಗ, ಎಲ್ಲವನ್ನೂ ಹೊತ್ತು ತರುವ ಗಾಳಿ ನನ್ನ ಮೇಲೆ ಯುದ್ಧವನ್ನೇ ಮಾಡುತ್ತಿರುವಂತೆ ತೋರುತ್ತಿದೆ ನನಗೆ ಈ ಎಲ್ಲ ಸಾಧನಗಳಿಂದ ಸಂತೃಪ್ತಿಯಿಲ್ಲ ಕೃಷ್ಣನು ವಂಚಕನೇ ಸರಿ ಸಂಧ್ಯಾಕಾಲವೂ ಮುಗಿಯುತ್ತಿದೆ ಆತನನ್ನು ಗೋಪಿಯರು ವಶಪಡಿಸಿಕೊಂಡು ಆತನ ದಿವ್ಯವೇಣುಗಾನವನ್ನು ಕೇಳುತ್ತಿರಬಹುದು ಅವನು ನಮ್ಮನ್ನು ಪೂರ್ಣವಾಗಿ ಮರೆತೇ ಹೋಗಿರಬಹುದು ಆ ಕೊಳಲಿನ ಧ್ವನಿಯೇ ನನಗೆ ಮೃತ್ಯುರೂಪಿಯಾಗಿದೆ ಆತನ ರಸಿಕತೆ ತುಂಬಿದ ಆ ಮುಖ ಈಗ ಸ್ಪೃಹಣೀಯ ವಾಗಿಯೇ ತೋರದಲ್ಲ ರಾತ್ರಿಯೂ ಬಂದು ಬಿಟ್ಟಿತು ಆತನ ಸುಳಿವೇ ಕಾಣೆ ಎಲ್ಲ ಪ್ರಾಕೃತಿಕ ವ್ಯಾಪಾರಗಳೂ ನನಗೆ ಬಾಧೆಯನ್ನೇ ಉಂಟುಮಾಡುತ್ತಿವೆ ಸಮುದ್ರವೂ ಮೇಲೆದ್ದು ಮೊರೆದು ಹಾವಳಿಯೆಬ್ಬಿಸಿದೆ ಈ ಅವಸ್ಥೆಯಲ್ಲಿ ಅವನಿಲ್ಲದೆ ಹೇಗೆ ತಾನೇ ಇರಲು ಸಾಧ್ಯ?

29. ದಶಮಶತಕ ತೃತೀಯ ದಶಕ : ನಾಯಕಿಯು ವಿರಹಬಾಧೆಯನ್ನು ಮತ್ತೂ ವಿವರಿಸುತ್ತಾಳೆ

ನನ್ನ ತೋಳುಗಳು ಪುಷ್ಟಿಯಾಗಿದ್ದವು - ಈಗ ಹೇಗಿದೆ ಕೋಗಿಲೆ ನವಿಲುಗಳಿಗೇನು ಗೊತ್ತು ನನ್ನ ಸಂಕಟ, ಅವು ಸಂತೋಷವಾಗಿ ನರ್ತಿಸುತ್ತಿವೆ ಪಶುಗಳನ್ನು ಮೇಯಿಸಲು ನೀನು ಹೊರಟರೆ ಹಗಲು ಕಲ್ಪಸದೃಶವಾಗುತ್ತವೆ ನಿನ್ನ ಕಣ್ಣುಗಳು ಶೂಲದಂತೆ ನನ್ನ ಎದೆಯನ್ನು ಇರಿಯುತ್ತಿದೆ ಕೃಷ್ಣ ನಿನಗೆ ಕೃಪೆ ಎಂಬುದೇ ಇಲ್ಲವಲ್ಲ ನಿನ್ನ ಆಲಿಂಗನದಾಸೆಯಿಂದ ನನ್ನ ಸ್ತನಗಳು ತಹತಹಿಸುತ್ತ ಹಿಗ್ಗುತ್ತಿದ್ದವು, ಈಗಲೋ ಆನಂದವು ನಷ್ಟವಾಗಿ ಪ್ರಾಣವನ್ನೇ ಅಪಹಾರಮಾಡುತ್ತಿದೆ ನಿನ್ನ ವಿರಹದಿಂದ ನನ್ನ ಆಸೆಯು ಬೆಳೆಯುತ್ತಿರುವುದೇ ವಿನಃ ನಿರಾಶೆ ಆಗಿಲ್ಲ ನೀನು ಹಸುಗಳನ್ನು ಮೇಯಿಸಲು ಹೋಗಿ ವಿಳಂಬ ಮಾಡಬೇಡ - ಹೋಗಲೇ ಬೇಡ, ನೀನು ಹಾಗೆ ಹೊರಟರೆ ನನ್ನ ದೇಹ ಮನಸ್ಸು ಆತ್ಮ ಎಲ್ಲವೂ ಬೆಂದು ಹೋಗುವುದು. ಒಂದು ಹಗಲೂ ಕಳೆಯುವುದು ಕಷ್ಟವಾಗುವುದು ನಮ್ಮ ಕಣ್ಣಲ್ಲಿ ನೀರು ತುಂಬಿ ಏನನ್ನೂ ಕಾಣಲು ಸಾಧ್ಯವಾಗದು ನಮ್ಮ ವಿರಹ ನಷ್ಟವಾಗುವ ಪರಿ ನಿನಗೇ ಗೊತ್ತು ನಿನಗೋ ನಮ್ಮ ವಿರಹ, ನಷ್ಟ, ದುಃಖ, ಬಾಧೆ - ಇವುಗಳು ಮನಸ್ಸಿಗೇ ತಟ್ಟವು. ನಿನಗೆ ಪಶುಗಳನ್ನು ಮೇಯಿಸುವುದೊಂದೇ ಗುರಿ ನಮ್ಮನ್ನು ತ್ಯಜಿಸಿ ಹೊರಟು ಬಿಡುವೆ ನೀನಾಡುವ ಮಾತುಗಳು ಸಲ್ಲಾಪಗಳು ಹೀಗೆ ವಂಚಿಸುವ ಮಾತುಗಳೆಂದು ತಾನೇ ನಾವು ತಿಳಿಯಬೇಕು ಆದ್ದರಿಂದ ಅವುಗಳನ್ನು ನೆನೆಯುವುದೂ ಒಂದೇ ಪ್ರಾಣವನ್ನು ಕಳೆದುಕೊಳ್ಳುವುದೂ ಒಂದೇ ಎನ್ನಿಸಿದೆ ಅವೆಲ್ಲ ಮೋಸದಂತೆ ಭಾಸವಾಗುತ್ತಿದೆ ಎಲೈ ಕೃಷ್ಣನೇ ಸಂಧ್ಯಾಕಾಲ ಬಂದಿತು, ನೀನು ಹಿಂದಿರುಗಿ ಬಂದು ನಿನ್ನ ವಕ್ಷದ ಮಾಲೆಯ ಮೊಗ್ಗುಗಳು ನಮ್ಮ ಉರವಲ್ಲಿ



## ಮಾರಾಟಕ್ಕೆ ಸಿದ್ಧವಾಗಿರುವ ಪುಸ್ತಕಗಳು

**ಶ್ರೀ ವೆಂಕಟೇಶ ಸುಪ್ರಭಾತ**
ವ್ಯಾಖ್ಯಾನಸಹಿತ ಬೆಲೆ 2-50
**ಗುರು ಶ್ರೀಶ ವಿಠಲದಾಸರ ಕೃತಿಗಳು**
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 6-00
**ದಾಸತತ್ತ್ವಪ್ರಕಾಶಿಕೆ**
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 10-00
**ಸ್ತೋತ್ರಕುಸುಮ ಮಾಲಾ**
ಸಂ - ಎಂ ಎಸ್ ವೆಂಕಟಾಚಲಂ 3-00
**ತ್ಯಾಗರಾಜಸ್ವಾಮಿ ಕೃತಿಗಳ ಹಲವು ಮುಖಗಳು**
ಎನ್ ಎಸ್ ಮೂರ್ತಿ ಬೆಲೆ 2-60
**ಕರ್ನಾಟಕ ಹರಿದಾಸರು**
ತೆಲುಗು, ಹಿಂದಿ, ಆಂಗ್ಲ, ಕನ್ನಡ 2-25
**ಶ್ರೀ ಶ್ರೀನಿವಾಸನ ಹಾಡುಗಳು**
ಪ್ರಸನ್ನ ವೆಂಕಟದಾಸರು
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 7-00
**ಕನಕದಾಸರು ಅವರ ಸಾಹಿತ್ಯಸಮೀಕ್ಷೆ**
ಸಂ - ಕೆ ಅಪ್ಪಣ್ಣಾಚಾರ್ಯ 16-00
**ಶ್ರೀದವಿಠಲದಾಸರ ಕೃತಿಗಳು**
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 9-00
**ಉರಗಾದ್ರಿವಾಸ ವಿಠಲದಾಸರ ಜೀವನ ಮತ್ತು ಕೃತಿಗಳು**
ಸಂ - ಕೆ ಎಂ ಕೃಷ್ಣರಾವ್ ಬೆಲೆ 15-00
**ಶ್ರೀ ಗುರು ವಿಜಯ ವಿಠಲದಾಸರ ಅಷ್ಟಕ**
ಬೆಲೆ 3-00
**ಪುರಂದರೋಪನಿಷತ್**
ಬನ್ನಂಜೆ ಗೋವಿಂದಾಚಾರ್ಯ 6-75
**ನಮ್ಮ ಸಮಸ್ಯೆಗಳಿಗೆ** 7-00
ಭಗವದ್ಗೀತೆಯ ಪರಿಷ್ಕಾರ
- ಡಾ|| ಎಸ್ ಬಿ ರಘುನಾಥಾಚಾರ್ಯ

**ಗೀತಾಸಾರೋದ್ಧಾರ** *14-00*
ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು

ಅಂಚೆ ವೆಚ್ಚ ಪ್ರತ್ಯೇಕ ಸಗಟು ಖರೀದಿಗೆ ಆಕರ್ಷಕ ಕಮಿಷನ್ ಉಂಟು ವಿ ಪಿ ಪಿ ಇಲ್ಲ ಡಿ ಡಿ ಗಳನ್ನು ಮಾತ್ರ ಸ್ವೀಕರಿಸಲಾಗು ವುದು ಕೂಡಲೇ ಬರೆಯಿರಿ

ಪುಸ್ತಕಮಾರಾಟ ವಿಭಾಗ,
ತಿ ತಿ ದೇ ತಿರುಪತಿ - 517 507



ಪರಿಮಳಿಸುವಂತೆ ಮಾಡು ನಿನ್ನ ಅಧರಾಮೃತ ದಿಂದ ನಮ್ಮ ಅಧರಗಳನ್ನಲಂಕರಿಸು ನಿನ್ನ ಪದ್ಮಪಾಣಿಯಿಂದ ನಮ್ಮ ತಲೆಯನ್ನು ಆಲಂಗಿಸು ಇವೆಲ್ಲ ವನ್ನು ಪ್ರತ್ಯೇಕವಾಗಿ ನಾವು ಕೋರಬೇಕೇನು! ನಿನಗೆ ತಿಳಿಯದೇನು? ನಮ್ಮನ್ನು ಸಮಾಧಾನ ಪಡಿಸುವ ಮಾರ್ಗ ನಿನ್ನ ಪಾದಗಳನ್ನು ನಮ್ಮ ಶಿರದ ಮೇಲೆ ಅನುಗ್ರಹಿಸು ನಾವು ದಾಸಭೂತರಲ್ಲವೇ! ನಿನ್ನ ಆಶ್ರಯಕ್ಕೆ ಹಲವರು ಹಾತೊರೆಯುತ್ತಿದ್ದಾರೆ, ನಿಜ ನಮ್ಮ ಸ್ತ್ರೀತ್ವ ನಮಗೆ ಹೆಚ್ಚು ಕೋಮಲೆಯರು ನಾವು ಸ್ವಲ್ಪ ದುಃಖವನ್ನೂ ಸಹಿಸುವವರಲ್ಲ ನಮ್ಮ ಹೃದಯ ಮೇಣದಂತೆ ನಿನ್ನ ವಿರಹಾಗ್ನಿಯಲ್ಲಿ ಕರಗುತ್ತದೆ ಪಸುವನ್ನು ಕಾಯಲು ಹೋಗದೆ ದಯವಿಟ್ಟು ನಮ್ಮ ಬಾದೆಯನ್ನು ಪರಿಹರಿಸು ಕೈಬಳೆ ಒಡ್ಯಾಣ ಎಲ್ಲ ಕೆಳಗೆ ಬೀಳುತ್ತಿವೆ,ಕಣ್ಣು ತುಂಬಿದೆ ಸ್ತನ, ತೋಳು ಬಾಡಿವೆ ನಿನ್ನ ಪಾದಾರವಿಂದವು ಕಠಿಣ ಮಾರ್ಗದಲ್ಲಿ ನಡೆದು ನೋಯುತ್ತವೆ,ಬಾಡುತ್ತವೆ, ರಾಕ್ಷಸರು ಅಪಾಯವುಂಟುಮಾಡುತ್ತಾರೆ - ಇವೆಲ್ಲವನ್ನೂ ನೆನೆದೇ ನಮಗೆ ದುಃಖ ಹೆಚ್ಚಾಗುತ್ತದೆ ಕೃಷ್ಣ ನೀನು ಹಸುಗಳ ಹಿಂದೆ ಹೋಗದೇಡ ನಮ್ಮೊಡನೆ ಸೇರು, ಸಂತೋಷವನ್ನು ನೀಡು ನಿನ್ನ ಸೌಂದರ್ಯಾತಿಶಯದಿಂದ ಆನಂದವನ್ನು ನೀಡು ನಾವೇ ನಿನಗೆ ಭೋಗ್ಯರು ತಿಳಿಯಿತೆ! ನಾವೂ ಆನಂದಿಸುವೆವು ನಮ್ಮ ಸ್ತ್ರೀತ್ವ ಸಂತೃಪ್ತಿ ಹೊಂದಲಿ ಕಂಸನ ಅನುಚರರು ನಿನ್ನನ್ನು ಹಿಂಸಿಸಲು ಕಾದಿರುವರು ದಯವಿಟ್ಟು ಗೋವುಗಳ ಕಾಯಲು ಹೋಗದಿರು ನಮ್ಮನ್ನು ಬಿಟ್ಟು ಕದಲದಿರು ನಮ್ಮ ಮಾತುಗಳನ್ನು ಕೇಳು, ರಾಕ್ಷಸರಿಂದ ಎಲ್ಲ ಅಪಾಯವಾಗುವುದೋ ಎಂದು ಕಾತರರಾಗಿ ಋಷಿಮುನಿಗಳೂ ತಮ್ಮ ಕಾರ್ಯಗಳನ್ನು ಮರೆತು ಅಲ್ಲಲ್ಲಿ ನಿಂತು ನೋಡುತ್ತಿರುವರು ನೀನೋ ಏಕಾಂಗಿ ಶಸ್ತ್ರಾಸ್ತ್ರಗಳನ್ನೂ ಜೊತೆಗೆ ಒಯ್ಯುವುದಿಲ್ಲ ಅಣ್ಣ ಬಲರಾಮನೂ ಸಂಗಡವಿಲ್ಲ ಇವೆಲ್ಲವನ್ನೂ ಯೋಚಿಸಿ ಭ್ರಾಂತಳಾಗುತ್ತೇನೆ ನಿನಗೋ ಪರಮಪದ ವಾಸಕ್ಕಿಂತಲೂ ಪಶು ಸಂಗೋಪನೆಯೇ ಪರಮ ಪ್ರಿಯವಾಗಿದೆಯಲ್ಲ ನನಗೆ ಎದೆ ಹಾರುತ್ತಿದೆ

ಹೀಗೆ ನಮ್ಮಾಳ್ವಾರರ ದಿವ್ಯಪ್ರಬಂಧದಲ್ಲಿ ನಾಯಿಕಾಭಾವದ ಆ ವೇಗ ಹುಟ್ಟು ಹೊಳೆಯಂತೆ ಎಲ್ಲೆ ಕಟ್ಟೆಸೆಲ್ಲ ಮೀರಿ ಪ್ರವಹಿಸಿ, ಭಾವುಕರ ಭಾವನೆಗಳನ್ನು ಕೊಚ್ಚಿಕೊಂಡು ಹರಿಹಾಯುತ್ತದೆ ನಮ್ಮ ಅಂತರಂಗವನ್ನೂ ಆವರಿಸಿ ತನ್ನತ್ತ ಸೆಳೆಯುತ್ತದೆ ಪ್ರವಾಹದಲ್ಲಿ ನಮ್ಮನ್ನೂ ಒಳಗಾಗಿಸುತ್ತದೆ ಇದೊಂದು ಅನುಭಾವದ ಉನ್ನತಸ್ತರ ಪರಮಾತ್ಮ ಭಕ್ತನನ್ನು ಬಿಡಕೂಡದು ಭಕ್ತ ಆತನನ್ನು ಕಟ್ಟಿಹಾಕಬೇಕು ಆತನನ್ನು ಹೋಗಗೊಡಬಾರದು. ಪರಮಾತ್ಮನೂ ಕೂಡ ಭಕ್ತನ ಚಿಂತನೆಯನ್ನಲ್ಲದೆ ಬೇರೊಂದನ್ನೂ ನೆನೆಯಕೂಡದು ಪರಮಾತ್ಮನಿಗೆ ಯಾವ ವಿಧವಾದ ತೊಂದರೆಯೂ ಆಗಕೂಡದು, ಕೇಡೂ ಒದಗಕೂಡದು ನಮ್ಮ ರಕ್ಷಣೆಗೆ ಆತ ಸದಾ ಸನ್ನದ್ಧನಾಗಿರಬೇಕು ಅವನು ನಮ್ಮ ರಕ್ಷಣೆಗೆ ಇದ್ದಾನೆಂಬುದೇ ನಮಗೆ ಒಂದು ಧೈರ್ಯ, ವಿಶ್ವಾಸ, ನಂಬಿಕೆ ಅವನಿದ್ದರೆ ವಿಶ್ವ, ವಿಶ್ವದಲ್ಲಿ ಒಂದು ಸೊಗಸು, ಆನಂದ, ಅವನಿಲ್ಲದ ವಿಶ್ವ ಯಾರಿಗೆ ಬೇಕು? ಅವನ ಊಳಿಗಕ್ಕಿಂತ ಬೇರೆಯ ವಸ್ತು ಇಲ್ಲ ಅವನಲ್ಲಿ ಒಂದಾಗಿ ನಾವು ಬಾಳಿದಾಗಲೇ ನಮ್ಮ ಜೀವನಕ್ಕೆ ಒಂದು ಅರ್ಥ ಅವನ ಅನುಗ್ರಹವಿಲ್ಲದ ಜೀವನಕ್ಕೆ ಯಾವ ಅರ್ಥವೂ ಇಲ್ಲ, ಸೊಬಗೂ ಇಲ್ಲ, ಆಸೆಯೂ ಇಲ್ಲ ಸೂರ್ಯನ ಬೆಳಕು ಬಿದ್ದರೇ ಚಂದ್ರನು ಅಂದವಾಗಿ ಮೆರೆಯಬಲ್ಲ ಆನಂದವನ್ನೂ ಲೋಕಕ್ಕೆ ಉಂಟುಮಾಡಬಲ್ಲ ಅವನ ಬೆಳಕು ಇಲ್ಲದಿದ್ದರೆ ಎಲ್ಲೆಲ್ಲೂ ಗಾಢಾಂಧಕಾರ ಚಂದ್ರನಿಗೂ ಕಳೆಯಿಲ್ಲ, ರಾತ್ರಿಗೂ ಸೊಬಗಿಲ್ಲ ಲೋಕವೆಲ್ಲ ಬರಿಯ ಕತ್ತಲೆ ನಮ್ಮಾಳ್ವಾರ್ ಅವರ ಭಕ್ತಿಯ ವಿಲಕ್ಷಣವಾದ ಮುಖ ಇಲ್ಲಿಯೇ ಪ್ರಾಮುಖ್ಯತೆಯನ್ನು ಪಡೆಯುವುದು ವಿಶಿಷ್ಟಾದ್ವೈತ ಭಾವನೆಯನ್ನು ಸಂಪೂರ್ಣವಾಗಿ ಮೆರೆಸುವುದು

ಈ ಇಪ್ಪತ್ತೊಂಭತ್ತು ದಶಕಗಳಲ್ಲಿ ಹಲವು ಕಡೆ ಭಾವನೆಗಳು ಪುನರುಕ್ತಿಗೊಂಡಿದ್ದರೂ, ಒಟ್ಟಿಗೆ ನಾವು ಅನುಸಂಧಾನ ಮಾಡಿದಾಗ, ಆ ಭಕ್ತಿಯ ಅನುಭವಿಸುವಾಗ ಅವರ ಕಾವ್ಯಧಾರೆಯ ಸೊಬಗಿನಲ್ಲಿ ಆ ಎಲ್ಲ ಪುನರುಕ್ತಿಗಳು ಅಂತರ್ಧಾನ ಹೊಂದಿ ಅದರ ಸೌಂದರ್ಯ ನಮ್ಮನ್ನು ಸಂಪೂರ್ಣವಾಗಿ ವಶಪಡಿಸಿಕೊಳ್ಳುವ ಪ್ರಬಲ ಕಾಂತಶಕ್ತಿಯನ್ನು ಹೊಂದಿರುವುದನ್ನು ನಾವು ಕಾಣಬಹುದಾಗಿದೆ

ನಮ್ಮಾಳ್ವಾರ್ ಅವರ ಪೆರಿಯ ತಿರುವಂದಾದಿಯಲ್ಲಿ ಸಂಗ್ರಹವಾಗಿ ಮೂಡಿಬಂದ ನಾಯಿಕಾಭಾವ ಇಲ್ಲಿ ಎಂದರೆ ತಿರುವಾಯ್ಮೊಳಿಯಲ್ಲಿ ಚಿಂತಿಸಿ ಹೊಸ ಹೊಸ ಆಯಾಮಗಳಿಂದ ಸೊಗಸಿ ಉಪಬ್ರಂಹಣಗೊಂಡಿರುವುದೋ ಎನಿಸುತ್ತದೆ ಇದೇ ಪರಾಂಕುಶನಾಯಕಿಯ ಆನಂದಾನುಭೂತಿ

(ಮುಗಿಯಿತು)



# ಶ್ರೀ ವೆಂಕಟೇಶ್ವರಸ್ವಾಮಿ ಆಲಯ

ಆಂಗ್ಲಮೂಲ - ಡಾ|| ಎನ್. ರಮೇಶನ್.

ಕನ್ನಡಾನುವಾದ - ಬಿ. ಎನ್. ಶ್ರೀನಿವಾಸನ್.

(ಮುಂದುವರಿದಿದೆ)

# ಆಲಯ ಶಾಸನಗಳು

## 22. ಶಾಸನಗಳಲ್ಲಿ ಬಳಸಲಾದ ಕೆಲವು ಅಪರೂಪದ ಪದಗಳು

ತಿರುಮಲೆಯ ಆಲಯದಲ್ಲಿನ ಶಾಸನಗಳಲ್ಲಿ ಬಳಸಲಾದ ಶಬ್ದಗಳು ಬಹುತೇಕ ನಡುಗಾಲದ ತಮಿಳು ಶಬ್ದಗಳು. ಅವುಗಳನ್ನು ವರ್ಗೀಕರಣಮಾಡಿ ಅವುಗಳ ಈಗಿನ ಅರ್ಥಗಳನ್ನು ಕೆಳಗಿನ ಪಟ್ಟಿಯಲ್ಲಿ ನೀಡಲಾಗಿದೆ.

| | |
|---|---|
| ಶ್ರೀನಿವಾಸ | |
| ತಿರುವೆಂಕಟ ಮುಡ್ಮೈಯಾನ್ | ತಿರುಮಲೆಯ ಆಲಯದಲ್ಲಿ |
| ಪೆರಿಯ ಪೆರುಮಾಳ್ | ನೆಲೆಸಿರುವ ಶ್ರೀ ವೆಂಕಟೇಶ್ವರಸ್ವಾಮಿ |
| ಮೂಲ ಮೂರ್ತಿ | |
| ಮಲೈಕ್ಕುನಿಯ ನಿನ್ರ ಪೆರುಮಾಳ್ | |
| ಮಲೈಕ್ಕುನಿಯ ನಿನ್ರ ಪೆರುಮಾಳ್ | ಶ್ರೀ ವೆಂಕಟೇಶ್ವರಸ್ವಾಮಿಯ |
| ಮಲೈ ಪೆರುಮಾಳ್ | ಉತ್ಸವ ಮೂರ್ತಿ |
| ಮಲೆಯಪ್ಪಸ್ವಾಮಿ | |
| ಉತ್ಸವಮೂರ್ತಿ | |
| ವೇಂಕಟತ್ತುರೈವರ್ | ತಿರುಮಲೆಯ ಆಲಯದಲ್ಲಿರುವ |
| | ಉಗ್ರ ಶ್ರೀನಿವಾಸ ಮೂರ್ತಿ |
| ಅಲ್ಮೇಲ್ಮಂಗೈ ನಾಚ್ಚಿಯಾರ್ | |
| ಶ್ರೀ ಪದ್ಮಾವತೀದೇವಿ | ಶ್ರೀ ವೆಂಕಟೇಶ್ವರಸ್ವಾಮಿಯ ಸತಿ |
| ಲಕ್ಷ್ಮೀದೇವಿ | |
| ಗೋವಿಂದ ಪ್ಪೆರುಮಾಳ್ | |
| ಗೋವಿಂದ ರಾಜನ್ | ತಿರುಪತಿಯ ಆಲಯದಲ್ಲಿರುವ |
| ಪಳ್ಳಿಕ್ಕೊಂಡ ಪ್ಪೆರುಮಾಳ್ | ಶ್ರೀ ಗೋವಿಂದ ರಾಜಸ್ವಾಮಿ |
| ಕೃಷ್ಣನ್ | ಶ್ರೀಕೃಷ್ಣ |
| ರಘುನಾಥನ್ | ಶ್ರೀರಾಮ |
| ಪೆರಿಯ ರಘುನಾಥನ್ | |
| ಕಯ್ಯರ್ ಚಕ್ರಂ | ಶ್ರೀ ಸುದರ್ಶನ - ಚಕ್ರತ್ತಾಳ್ವಾನ್ |
| ತಿರುವಾಜಿ ಆಳ್ವಾನ್ | |
| ನರಸಿಂಗ ಪೆರುಮಾಳ್ | ಶ್ರೀ ನರಸಿಂಹಸ್ವಾಮಿ |
| ಅಳಗಿಯ ಸಿಂಗರ್ | |
| ನಾಚ್ಚಿಮಾರ್ | ಉತ್ಸವ ಮೂರ್ತಿಯ ದೈವಸತಿ |
| ವರಾಹಸ್ವಾಮಿ | ತಿರುಮಲೆಯ ಶ್ರೀ ವರಾಹಸ್ವಾಮಿ |
| ಅಚ್ಯುತಸ್ವಾಮಿ | ತಿರುಪತಿಯ ಶ್ರೀ ಅಚ್ಯುತಸ್ವಾಮಿ |
| ಅಳಗಿಯ ಪೆರುಮಾಳ್ | ತಿರುಚಾನೂರಿನ |
| | ಶ್ರೀ ಸುಂದರರಾಜಸ್ವಾಮಿ |

| | |
|---|---|
| ವರದರಾಜ ಪೆರುಮಾಳ್ | ತಿರುಚಾನೂರಿನ |
| | ಶ್ರೀ ವರದರಾಜಸ್ವಾಮಿ |
| ಸೇನೈ ಮೊದಲಿಯಾರ್ | ಶ್ರೀ ವಿಷ್ವಕ್ಸೇನ |
| ತಿರುಕ್ಕೊಡಿ ಆಳ್ವಾನ್ | ಗರುಡಧ್ವಜ - ಗರುಡಾಳ್ವಾರ್ |
| ಶೂಡಿಕೊಡುತ್ತ ನಾಚ್ಚಿಯಾರ್ | |
| ಶ್ರೀ ಗೋದಾದೇವಿ | ಮಹಾವಿಷ್ಣು ಪತ್ನಿ, |
| ಆಂಡಾಳ್ | |
| ಆಳ್ವಾರ್ | ಶ್ರೀ ವೈಷ್ಣವ ಸಂತರು, |
| | ಪರಮಯೋಗಿಗಳು |
| ಉಡ್ಮೈಯವರ್ | |
| ಎಂಬೆರುಮಾನಾರ್ | ಶ್ರೀ ಮದ್ರಾಮಾನುಜರು |
| ರಾಮಾನುಜಂ | |
| ಆಚಾರ್ಯ | ಆಧ್ಯಾತ್ಮಿಕ ಗುರುಗಳು |
| ಪೂರ್ವಾಚಾರ್ಯ | |
| ತಿರುವಡಿಗಳ್ | ಹನುಮಂತ |
| ಗೋವಿಂದ ಕೃಷ್ಣನ್ | |
| ತಿರುವೆಂಕಟಗೋಪಾಲ ಕೃಷ್ಣ | ತಿರುಪತಿಯ ಶ್ರೀಕೃಷ್ಣಸ್ವಾಮಿ |
| ವಿರಲೇಶ್ವರ ಪೆರುಮಾಳ್ | |
| ಮದನಗೋಪಾಲ ಪೆರುಮಾಳ್ | |
| ವರದರಾಜರ್ | ತಿರುಪತಿಯ |
| | ಶ್ರೀ ವರದರಾಜಸ್ವಾಮಿ |
| ತಿರುಕಚ್ಚಿ ನಂಬಿ | ಶ್ರೀ ರಾಮಾನುಜರ ಪೂರ್ವಿಕ |
| ಜನಾರ್ದನ ಪೆರುಮಾಳ್ | ತಿರುಪತಿಯ |
| | ಶ್ರೀ ಜನಾರ್ದನಸ್ವಾಮಿ |
| ತಿರುಮಲೈ ನಂಬಿ | ಶ್ರೀ ರಾಮಾನುಜರ ಪೂರ್ವಿಕ |
| ಲಕ್ಷ್ಮೀನಾರಾಯಣ ಪೆರುಮಾಳ್ | ತಿರುಪತಿಯ |
| | ಶ್ರೀ ಲಕ್ಷ್ಮೀನರಸಿಂಹಸ್ವಾಮಿ |
| ಅಳಗಪ್ಪಿರನಾರ್ | ತಿರುಮಲೆಯ |
| | ಆಲಯದ ಕೊಲುವು ಶ್ರೀನಿವಾಸ |

ಪ್ರಸನ್ನತಿರುವೆಂಕಟ ಮುಡಿಯಾನ್ ತಿರುಮಲೆಯ ಆಲಯದ ಪ್ರಸನ್ನ ಶ್ರೀನಿವಾಸ ತಿರುಪತಿಯ ಶ್ರೀನಿವಾಸಸ್ವಾಮಿ

ತಿರುವೆಂಕಟ ಮುಡೈಯಾನ್

## ಆಲಯ ಜನರು, ಕಾರ್ಯಕ್ರಮಗಳು

ಸ್ಥಾನತ್ತಾರ್ - ತಿರುಮಲೆಯ ಆಲಯದ ಧರ್ಮದರ್ಶಿಗಳು ಅಥವಾ ಕಾರ್ಯ ನಿರ್ವಾಹಕರು

ಸಭೈಯರ್ - ಆಲಯ ಸಭೆಯ ಸದಸ್ಯರು ತಿರುಮಲೆ ಆಲಯ ಶಾಸಕರು

ತಿರುಮಲೈ - ತಿರುಮಲೆ ಬೆಟ್ಟಗಳು, ತಿರುಮಲೆ ಗ್ರಾಮ, ಶ್ರೀ ವೆಂಕಟೇಶ್ವರಸ್ವಾಮಿ ಆಲಯವಿರುವ ಮೇಲಿನ ತಿರುಪತಿ

ಶ್ರೀ ಭಂಡಾರಂ - ಆಲಯದ ಕೋಶಾಗಾರ

ಸಾಲೈ - ಆಲಯದ ಉಗ್ರಾಣ

ಸಂಕೀರ್ತನ ಭಂಡಾರ - ತಿರುಮಲೆಯ ಆಲಯದ ಒಳಗೆ ಮೊದಲನೆಯ ಪ್ರಾಕಾರದಲ್ಲಿ ತಾಳ್ಳಪಾಕ ಕವಿಗಳ ಸಂಕೀರ್ತನೆಗಳ ತಾಮ್ರಪತ್ರಗಳನ್ನು ಇಟ್ಟಿದ್ದ ಕೋಣೆ

ಪೊನ್ ಭಂಡಾರಂ - ತಿರುಮಲೆಯ ಆಲಯದಲ್ಲಿನ ಸುವರ್ಣ ಕೋಶ ಆಭರಣಾಗಾರ

ತಿರುಪ್ಪಣಿ ಭಂಡಾರ - ಆಲಯದ ಕಾಮಗಾರಿ ಭಂಡಾರ

ಆಸ್ಥಾನಂ/ತಿರುವೋಲಗಂ - ಆಲಯದ ದರ್ಬಾರು ಓಲಗ

ತಿರುಮಲ ಸೇವೆ - ಆಧುನಿಕ ತೋಮಾಲ ಸೇವೆ/ಅರ್ಚನೆ

ಅವಸರಂ - ಪೂಜೆ

ರಾಯಸಂ - ರಾಜಾಜ್ಞೆ ಅಥವಾ ರಾಜ ಕಾರ್ಯದರ್ಶಿ

ನಾಮಾರ್ಚನೆ - ಸಹಸ್ರ ನಾಮಾರ್ಚನೆ

ಪುಲುಗು ಕಾಪ್ಪು - ಶುಕ್ರವಾರಾಭಿಷೇಕ/ಪುನುಗು ಅಭಿಷೇಕ

ಮಲೈಕುನಿಯ ನಿನ್ರಾನ್ ಕಲ್- ತಿರುಮಲೆಯ ಆಲಯದ ಅಳತೆಯ ಮಾನ

ಚಾಲುಕ್ಯನಾರಾಯರ್ಣಕಲ್ - ತಿರುಪತಿಯ ಆಲಯದ ಅಳತೆಯ ಮಾನ

ತಿರುಪ್ಪಣಿ ಪಿಳ್ಳೈ - ಆಲಯದ ಕಾಮಗಾರಿಯ ಅಧಿಕಾರಿ

ಜೀಯರ್ - ಆಲಯದ ದಾರ್ಮಿಕ ಕ್ರಿಯೆಗಳನ್ನು ನಡಸುವವರು

ಏಕಾಂಗಿ ಶ್ರೀವೈಷ್ಣವ - ಅವರ ಸಹಾಯಕರು

ಆಚಾರ್ಯ ಪುರುಷ - ಧಾರ್ಮಿಕ ಗುರು

ನಂಬಿಮಾರ್ - ವೈಖಾನಸ ಅರ್ಚಕರು

ದಾಸನಂಬಿ - ಶಾತ್ತಾದ ಶ್ರೀವೈಷ್ಣವರು

ತಿರುನಿನ್ರ ಊರ್ ಒಡೆಯನ್ - ಆಲಯದ ಲೆಕ್ಕಾಧಿಕಾರಿ

ಕೋಯಿಲ್ ತೋಳರ್ - ಆಲಯದ ಪರಿಚಾರಕರು

ಕೋಯಿಲ್ ಕೆಳ್ವಿ - ಧಾರ್ಮಿಕ ಕಾರ್ಯದ ಪುರೋಹಿತರು

ಪೆರಿಯ ಕೋಯಿಲ್ ಕೆಳ್ವಿ

ತೇವೈ - ಆಲಯದ ಬಾಣಸಿಗರು

ತೇವೈಯಲ್ ಅಡಿಗೆಯವರು

ಸಿಪ್ಪಿಯರ್ - ಕಲೆಗಾರ (ಶಿಲ್ಪಿ)

ಉವಚ್ಚರ್ - ಆಲಯ ಸೇವಕರು

ಕಣ್ಗಾಣಿಪ್ಪನ್ - ಉಸ್ತುವಾರಿಯವರು (ಇನ್‌ಸ್ಪೆಕ್ಟರ್)

ಸಿಂಗಮುರೈ - ಇಂಧನ ಸರಬರಾಜುಗಾರ

ಮೇಲ್‌ನಾಯಮ - ಮೇಲುಸ್ತುವಾರಿಯವರು

ನಾಯಗಮ್

ಅನುಸಂಧಾನಂ - ದಾರ್ಮಿಕ ಕ್ರಿಯೆಗಳನ್ನು ನಡೆಸುವವ

ಮಕ್ಕರೈಸ್ವರೂಪಂ - ತಾಮ್ರದ ಪಾತ್ರೆಗಳ ಸರಬರಾಜುಗಾರ

ಕುಮ್ಮರ ಸ್ವರೂಪಂ - ಕುಂಬಾರ

ದೇಶಾಂತರಿ - ಹೊರಗಿನವ - ಯಾತ್ರಿಕ

ಪರದೇಶಿ ನಿರ್ವಾಹಂ - ನಿರ್ವಾಹಕ - ಮ್ಯಾನೇಜರ್

ವಗೈ - ಆಲಯಾಧಿಕಾರಿಗಳು

ನಂದವನಂ - ಆಲಯದ ಹೂದೋಟಗಳು

ತಿರುನಂದವನಂ

ಜ್ಯಾಲ - ಆಳ್ವಾರರ ಕೀರ್ತನೆಗಳು

ಮರಶೇಷಂ - ಮರಕ್ಕೆ ಸೇರಬೇಕಾದ ನಿವೇದಿತ ಪ್ರಸಾದ ಭಾಗ

ಅಡೈಪ್ಪು - ನಿವೇದಿತ ಪ್ರಸಾದದ ವಿತರಣೆಯ ಸಮಯ

ತಿರುಮಂಜನ - ಅಭಿಷೇಕ

ಸ್ನಪನ ತಿರುಮಂಜನ

ಜೀವಿತಂ - ಸಂಬಳ

ಸೀರ್ಮೈ - ಜಿಲ್ಲೆ ಅಥವಾ ಸೀಮೆ

ನಾಡು - ಜಿಲ್ಲೆ

ರಾಜ್ಯಂ - ಪ್ರಾಂತ್ಯ

ತೊನ್ನೈ - ಉಚಿತ ಕಾಣಿಕೆ

ತಿರುಪ್ಪಳಿ ದಾನಂ - ಪುಷ್ಪಗಳು

ಪರಿವಟ್ಟಂ - ಪವಿತ್ರ ವಸ್ತ್ರದ ಸೆರಗು

ತಿರುಮುನ್ ಕಾಣಿಕ್ಕೈ - ನಗದು ಕಾಣಿಕೆ

ತಿರುಕ್ಕೈ ವಳಕ್ಕಂ - ಚಿಲ್ಲರೆ ವೆಚ್ಚಗಳು

ಪಂಚಧಾರಿ - ಶುದ್ಧ ಸಕ್ಕರೆ

ಕಳಭಂ - ಸುಗಂಧ ಚಂದನ

ಪಣಿಮುರೈ - ಆಲಯ ಪರಿಚಾರಕರು

ತುಕ್ಕನ್ - ವಾಹನಗಳನ್ನು ಹೊರುವವರು

ವೈಷ್ಣವಕಾರಿ - ಶ್ರೀವೈಷ್ಣವ ಅಧಿಕಾರಿ

## ವಿವಿಧ ದಾಖಲೆ ಪತ್ರಗಳು

ಶಿಲಾಶಾಸನ ಕಲ್ಲಿನಲ್ಲಿ ಕೊರೆದ ದಾಖಲೆಗಳು

ದರ್ಮಶಾಸನ

| | |
|---|---|
| ಪೊಲಿಯಾಟ್ಟು | ಹಣದ/ಭೂಮಿಯ ಮೇಲಿನ ಬಡ್ಡಿ |
| ಕೈಂಕರ್ಯಂ | ಆಲಯದಲ್ಲಿ ಅರ್ಚನೆ/ಸೇವೆ |
| ಉಭಯ | ದಾನ, ಸೇವೆ |
| ತಿರುವಿಡೈಯಾಟ್ಟಂ | ಆಲಯಕ್ಕೆನೀಡಿದ ಗ್ರಾಮಗಳು/ಭೂಮಿ |
| ಸರ್ವಮಾನ್ಯಂ | ಸುಂಕ ವಿಲ್ಲದ ಗ್ರಾಮ/ಭೂಮಿ |
| ಪಣಂ-ನರ್ಪಣಂ | ನಾಣ್ಯಗಳು/ಸುವರ್ಣ ನಾಣ್ಯಗಳು |
| ರೇಖೈ ಪೊನ್ | |
| ರೇಖೈ ವರಹಂ | |
| ಗದ್ಯಾಣಂ | |
| ವಿಟ್ಟವರ್ ವಿಳಕ್ಕಡು | ದಾನಿಗಳ ದಾಯಭಾಗದ ಪ್ರಸಾದ |

## ವಿವಿಧ ಪ್ರಸಾದಗಳು

| | |
|---|---|
| ಸಂಧಿ | ಪ್ರಸಾದ ನಿವೇದನೆ |
| ಸಂಧಿ ತಿರುಪ್ಪಾನಕಂ | |
| ರಾಜಾನ್ನ ತಿರುಪ್ಪಾನಕಂ | |
| ವೆಳ್ಳೈ ತಿರುಪ್ಪಾನಕಂ | |
| ಅರ್ಧನಾಯಕ ತಳಿಗೈ | |
| ನಾಯಕ ತಳಿಗೈ | |
| ಧದ್ಯೋದನಂ | |
| ಮಾತ್ತಿರೈ ತಳಿಗೈ | |
| ಪರುಪ್ಪವಿಯಲ್ | ಸುಂದಲ್-ಕಡಲೆ ಸುಂಡಲ್ |
| ತಿರುಪ್ಪಯರಂ | ದೇಳೆಯ ವಡೆ |
| ಅವಲ್‌ಪಡಿ | ಅವಲಕ್ಕಿ |
| ತೇನ್ ಕುಳ್ಲ್ | ತೇಂಗೊಳಲು |
| ಪಂಚಾಹವಿ | ಪವಿತ್ರ ಪ್ರಸಾದ |

## ವಿವಿಧ ಹಬ್ಬ ಹರಿದಿನಗಳು

| | |
|---|---|
| ತಿರುನಾಳ್ ಬ್ರಹ್ಮೋತ್ಸವಂ | ವಾರ್ಷಿಕ ಉತ್ಸವ |
| ತಿರುಕ್ಕೊಡಿ ತಿರುನಾಳ್ | ಬ್ರಹ್ಮೋತ್ಸವ |
| ತಿಂಗಳ ದಿವಸಂ | ಮಾಸಿಕ ಉತ್ಸವ |
| ವಿಶೇಷ ದಿವಸಂ | ವಿಶೇಷ ಉತ್ಸವ |
| ತಿರುವನಂತಾಳ್ | ಶೇಷವಾಹನೋತ್ಸವ |
| ತಿರುನಕ್ಷತ್ರಂ | ಮಾಸಿಕ ಜನ್ಮನಕ್ಷತ್ರ ಉತ್ಸವಗಳು |
| ಅಟ್ಟೈ ತಿರುನಕ್ಷತ್ರಂ | ವಾರ್ಷಿಕ ಜನ್ಮನಕ್ಷತ್ರ ಉತ್ಸವಗಳು |
| ಅಂಕುರಾರ್ಪಣಂ | ಉತ್ಸವದ ಆರಂಭದಲ್ಲಿ ಮಾಡುವ ಬೀಜಾವಾಪನ |
| ಅಧಿವಾಸಂ | ಪವಿತ್ರ ಕ್ರಿಯೆಗಳು |
| ಆದಿ ಆಯನಂ | ದಕ್ಷಿಣಾಯನ, ಆನಿವರ ಆಸ್ಥಾನ |
| ಆನಿವರೈ ಆಸ್ಥಾನಂ | |
| ಅಣ್ಣಾಊಂಜಲ್ ತಿರುನಾಳ್ | ಉಯ್ಯಾಲೆ ಉತ್ಸವ |
| ತಿರುಪ್ಪಳ್ಳಿಯೋಡಂ | ತೆಪ್ಪೋತ್ಸವ |
| ಜಲಕ್ರೀಡಾ | |

| | |
|---|---|
| ತೋಟ್ಟತ್ತಿರುನಾಳ್ | ತೋಟೋತ್ಸವ (ಉದ್ಯಾನೋತ್ಸವ) |
| ವನಭೋಜನಂ | ಉಲ್ಲಾಸ ವಿಹಾರ ಭೋಜನ |
| ನವಲಾರು ತಿರುನಾಳ್ | ವಸಂತೋತ್ಸವ |
| ಪಡಿಯ ವೇಟ್ಟೈ | ದೇಟೆಯ ಉತ್ಸವ |
| ಪುಷ್ಪಯಾಗಂ | ದ್ವಾದಶಾರಾಧನೆ ಉತ್ಸವ |
| ಕೋಡೈ ತಿರುನಾಳ್ | ಬೇಸಿಗೆ ಕಾಲದ ಉತ್ಸವ |
| ತಿರುಪ್ಪಳ್ಳಿಯೆಳುಚ್ಚಿ | ಧನುರ್ಮಾಸ ಪೂಜೆ |
| ಸಂಕ್ರಮಣಂ | ಮಕರ ಸಂಕ್ರಾಂತಿ |
| ತಿರುಪ್ಪುಡೆಯಾಡು | ಸುಗ್ಗಿ ಉತ್ಸವ |
| ತಿರುಕ್ಕಲ್ಯಾಣಂ | ವಿವಾಹೋತ್ಸವ |
| ತಿರುದ್ವಾದಶಿ | ಮುಕ್ಕೋಟಿದ್ವಾದಶಿ |
| ಯುಗಾದಿ | ಚಾಂದ್ರಮಾನ ಯುಗಾದಿ |
| ವಿಷು | ಸೌರಮಾನ ಯುಗಾದಿ |
| ವಸಂತ ಪೂರ್ಣಿಮಾ | ನರಸಿಂಹ ಜಯಂತಿ ಉತ್ಸವ |
| ವಸಂತೋತ್ಸವಂ | ವಸಂತಋತುವಿನ ಉತ್ಸವ |

## ಆಲಯದ ವಿವಿಧ ಭಾಗಗಳು

| | |
|---|---|
| ತಿರುಮಾಮಣಿ ಮಂಟಪಂ | ತಿರುಮಲೆಯ ಆಲಯದಲ್ಲಿ ದ್ವಾರಪಾಲಕರಿರುವ ಮಂಟಪ |
| ಚಿತ್ರಕೂಟ ಮಂಟಪಂ | ತಿರುಪತಿಯ ಆಲಯದ |
| ತಿಲ್ಲೈಕ್ಕುವಯುಟ್ಟನ್ ಮಂಟಪಂ | ದ್ವಾರಪಾಲಕರಿರುವ ಮಂಟಪ |
| ಚಕ್ರತೀರ್ಥಂ | ತಿರುಪತಿಯ ಪವಿತ್ರ ಪುಷ್ಕರಿಣಿ |
| ಆಳ್ವಾರ್ ತೀರ್ಥಂ | (ಕಪಿಲತೀರ್ಥ) |
| ಯಾನೈನಂಬಿರಾನ್ | ಗಜವಾಹನ |
| ಗರುಡವಾಹನಂ | ಗರುಡವಾಹನ |
| ವೈಕುಂಠ ವಿಮಾನಂ | ವಿಮಾನವಾಹನ |
| ಪುಂಕೋಯಿಲ್ | ಪುಷ್ಪಪಲ್ಲಕ್ಕಿ |
| ಶಿವಿಕೈ | ಪಲ್ಲಕ್ಕಿ |
| ತಿರುಕ್ಕೋನೇರಿ | ತಿರುಮಲೆಯ ಸ್ವಾಮಿಪುಷ್ಕರಿಣಿ |
| ರಾಮಾನುಜ ಕೂಟಂ | ಭೋಜನ ಸತ್ರ |
| ಸತ್ರಂ | ಛತ್ರ |
| ಲಕ್ಷ್ಮೀದೇವಿ ಮಂಟಪಂ | ತಿರುಪತಿಯಲ್ಲಿನ ಆಲಯದ ಪಡಿಕಾವಲಿಯ ಮುಂದಿನ ಮಂಟಪ |
| ನಂಜಿ ವಾಹನಂ | ಹಂಸವಾಹನ |
| ಹಂಸ ವಾಹನಂ | |
| ತಿರುಚ್ಚಿ | ತಿರುಚ್ಚಿ ವಾಹನ<br>ಶಿವಿಕೈ - ತಿರುಚ್ಚಿವಿಕೈ - ತಿರುಚ್ಚಿ |

(ಮುಂದಿನ ತಿಂಗಳು · ವಿಜಯನಗರ ಪೂರ್ವದ ಆಲಯ ಆಡಳಿತ)





# ವಾರ್ತಾಲಹರಿ

## ಪಾರ್ವೇಟಿ ಉತ್ಸವ

16-1-99 ರಂದು ತಿರುಮಲೆಯಲ್ಲಿ ಹಾರುವೇಟಿ ಉತ್ಸವ ಯಶಸ್ವಿಯಾಗಿ ನಡೆಯಿತು ಸ್ವಾಮಿಯ್ಯವರನ್ನು ಪಂಚಾಯುಧ ಸಹಿತರನ್ನಾಗಿ ಅಲಂಕರಿಸಿ ಪಾಪನಾಶನಂ ರಸ್ತೆಯಲ್ಲಿನ ಪಾರ್ವೇಟ ಮಂಟಪಕ್ಕೆ ಮೆರವಣಿಗೆಯಲ್ಲಿ ಕಾರ್ಯನಿರ್ವಹಣಾದಿಕಾರಿ ಡಾ|| ಐ ವಿ ಸುಬ್ಬಾರಾವ್ರು ಜೆ ಇ ಓ ಶ್ರೀ ಬಾಲಸುಬ್ರಹ್ಮಣ್ಯಂ, ತಿ ತಿ ದೇ ಅರಣ್ಯಾದಿಕಾರಿ ಶ್ರೀ ವೆಂಕಟ್ರಾಮಯ್ಯ ಅವರ ನೇತೃತ್ವದಲ್ಲಿ ಕರೆತರಲಾಯಿತು ಆಸ್ಥಾನ ವಿದ್ವಾಂಸ ಶ್ರೀ ಮಾಡಂಬಾಕಂ ಶ್ರೀನಿವಾಸ ಭಟ್ಟಾಚಾರ್ಯ ಅವರ ಹಿರಿತನದಲ್ಲಿ ಶಾಸ್ತ್ರೋಕ್ತವಾಗಿ ಪಾರ್ವೇಟಿ ಉತ್ಸವ ಸಾಂಗವಾಯಿತು ಅಪಾರ ಸಂಖ್ಯೆಯ ಭಕ್ತರೂ ಉತ್ಸಾಹದಿಂದ ಉತ್ಸವದಲ್ಲಿ ಭಾಗವಹಿಸಿದ್ದರು

## ಧ್ವನಿಸುರುಳಿ ಬಿಡುಗಡೆ

14-1-99 ರಂದು ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಆಲಯ ಪ್ರಾಂಗಣದಲ್ಲಿ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬರಾವ್ ಅವರು ತಿ ತಿ ದೇ ರಿಕಾರ್ಡಿಂಗ್ ಪ್ರಾಜೆಕ್ಟ್ ತಯಾರಿಸಿದ ಧ್ವನಿಸುರುಳಿಯನ್ನು ಬಿಡುಗಡೆ ಮಾಡಿದರು ತತ್ಸಂಬಂಧದಲ್ಲಿ ನಡೆದ ಸಮಾರಂಭದಲ್ಲಿ ರಿಕಾರ್ಡಿಂಗ್ ಪ್ರಾಜೆಕ್ಟ್ ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು ಶೆಟ್ಟಿ, ತಿ ತಿ ದೇ ಅರಣ್ಯಾಧಿಕಾರಿ ಶ್ರೀ ವೆಂಕಟ್ರಾಮಯ್ಯ ಡೆ ಇ ಓ ಶ್ರೀ ಲಕ್ಷ್ಮೀಪತಿ ಎ.ಇ ಓ ಶ್ರೀ ಭಕ್ತವತ್ಸಲಂ ಮೊದಲಾದವರು ಭಾಗವಹಿಸಿದ್ದರು

## ಪಲ್ಸ್ ಪೋಲಿಯೋ ಕಾರ್ಯಕ್ರಮ

17-1-99 ರಂದು ಭಾರತಾದ್ಯಂತ ನಡೆದ ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ತಿ ತಿ ದೇ ಆರೋಗ್ಯ ವಿಭಾಗವೂ ಸಕ್ರಿಯವಾಗಿ ಪಾಲುಗೊಂಡು ಮಕ್ಕಳಿಗೆ ಪೋಲಿಯೋ ನಿರೋದಕ ಲಸಿಕೆಯ ವಿತರಣೆ ಮಾಡಿತು ತತ್ಸಂಬಂಧದಲ್ಲಿ ನಡೆದ ಕಾರ್ಯಕ್ರಮದಲ್ಲಿ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವ್, ಅರಣ್ಯಾಧಿಕಾರಿ ಶ್ರೀ ವೆಂಕಟ್ರಾಮಯ್ಯ, ಜೆ ಇ ಓ ಶ್ರೀ ರಾಮಕೃಷ್ಣಯ್ಯ ಮೊದಲಾದವರು ಭಾಗವಹಿಸಿದರು

## ತಿರುಮಲೆಯಲ್ಲಿ ವೈಕುಂಠ ಏಕಾದಶಿ

1998 ರ ಡಿಸೆಂಬರ್ 29 ರಂದು ಮಂಗಳ ವಾರ ವೈಕುಂಠ ಏಕಾದಶಿ ಸಂದರ್ಭದಲ್ಲಿ ತಿರುಮಲೆಯ ಸ್ವಾಮಿ ಆಲಯದಲ್ಲಿ ವೈಕುಂಠ ದ್ವಾರವನ್ನು ತೆರೆಯಲಾಯಿತು ಸ್ವಾಮಿಯಿರುವ ಗರ್ಭಗುಡಿಯ ಸುತ್ತಲೂ ಆನಂದ ನಿಲಯ ವಿಮಾನದ ಕೆಳಗಿರುವ ವೈಕುಂಠ ಪ್ರದಕ್ಷಿಣಾಪಥವನ್ನು ಭಕ್ತರ ಪ್ರದಕ್ಷಿಣೆಗಾಗಿ ಅಂದು ತೆರೆದಿಡಲಾಗುವ ಕಾರ್ಯಕ್ರಮ ಅನೂಚಾನವಾಗಿ ನಡೆದು ಬಂದಿರುವಂತೆಯೇ, ಸರ್ವಶೋಭಾಯಮಾನವಾಗಿ, ವಿದ್ಯುದ್ದೀಪಾಲಂಕರಣದಿಂದ, ಪುಷ್ಪಾಲಂಕರಣದಿಂದ, ತಳಿರು ತೋರಣದಿಂದ ಸುಶೋಭಿತವಾದ ಈ ಪ್ರದಕ್ಷಿಣಾಪಥದಲ್ಲಿ, ಸ್ವಾಮಿಯ ದರ್ಶನಾನಂತರ ಯಾತ್ರಿಕರು ಮುಂದುವರೆದು ಆಲಯದ ಹುಂಡಿಯ ಬಳಿಯಿರುವ ವಿಷ್ವಕ್ಸೇನರ ಕಿರುಗುಡಿಯ ಬಳಿ ಪ್ರದಕ್ಷಿಣಾಪಥದಿಂದ ಹೊರಬರುವಂತೆ ಏರ್ಪಾಡು ಆಗಿದ್ದಿತು ಸಾವಿರಾರು ಮಂದಿ ಅತ್ಯಂತ ಭಕ್ತಿ ಪ್ರಪತ್ತಿಗಳಿಂದ ಈ ಪ್ರದಕ್ಷಿಣಾಪಥದಲ್ಲಿ ನಡೆದು ಸ್ವಾಮಿಗೆ ವಂದಿಸುತ್ತ ಹೊರಬಂದರು

ವೈಕುಂಠ ಏಕಾದಶಿಯ ಹಿಂದಿನ ಮಂಗಳವಾರ ಸ್ವಾಮಿಯ ಗರ್ಭಗುಡಿಯ ತಿರುಮಂಜನ ಕಾರ್ಯಕ್ರಮ ನಡೆದು ಯಶಸ್ವಿಯಾಗಿದ್ದಿತು ಡಿಸೆಂಬರ್ 29 ರಂದು ಬೆಳಗ್ಗೆ ವೈಕುಂಠ ಏಕಾದಶಿಯ ಅಂಗವಾಗಿ ಸಾವಿರಾರು ಮಂದಿ ಗೋವಿಂದ ಮಾಲಾ ವ್ರತಧಾರಿಗಳು ಗೋವಿಂದ ನಾಮಘೋಷ ಮಾಡುತ್ತ ತಿರುಮಲೆಯ ಬೆಟ್ಟವನ್ನೇರಿ ಸ್ವಾಮಿಯ ದರ್ಶನದಲ್ಲಿ ಪಾಲುಗೊಂಡರು

ಅಂದು ಬೆಳಗ್ಗೆ ಎಂಟು ಗಂಟೆಯಿಂದ 9 ಗಂಟೆಯವರೆಗೆ ಶ್ರೀದೇವಿ ಭೂದೇವೀ ಸಹಿತ ಶ್ರೀ ಮಲೆಯಪ್ಪಸ್ವಾಮಿಯವರನ್ನು ಅಲಂಕರಿಸಿ ಚಿನ್ನದ ರಥದಲ್ಲಿ ವೇದ ಘೋಷ, ಪ್ರಬಂಧ ಪಠಣ, ಮಂಗಳ ವಾದ್ಯ ಘೋಷ, ಗೋವಿಂದ ನಾಮ ಘೋಷಗಳ ನಡುವೆ ಉತ್ಸಾಹ ಭಕ್ತಿಗಳಿಂದ ರಥಬೀದಿಯಲ್ಲಿ ಮೆರವಣಿಗೆಯಲ್ಲಿ ಕರೆತರಲಾಯಿತು ತಿರುಮಲೆಯಲ್ಲಿ ಅಸಂಖ್ಯಾತ ಭಕ್ತರು ಬೀದಿ ಬೀದಿಯಲ್ಲಿ ನೆರೆದು ಸ್ವಾಮಿಯನ್ನು ಸ್ವಾಗತಿಸಿದರು

ಸ್ವರ್ಣರಥೋತ್ಸವ ಹಾಗೂ ಇನ್ನಿತರ ಕಾರ್ಯಕ್ರಮಗಳಲ್ಲಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ಕೆ ಆರ್ ವಿನಾಯಕ್, ಜೆ ಇ ಓ ಗಳು ಶ್ರೀ ರಾಮಕೃಷ್ಣಯ್ಯ ಶ್ರೀ ಬಾಲಸುಬ್ರಹ್ಮಣ್ಯಂ ಮತ್ತಿತರ ಅಧಿಕಾರಿಗಳೂ, ಭಾಗವಹಿಸಿದ್ದರು.



## ಧರ್ಮಕರ್ತರ ಮಂಡಳಿಯ ತೀರ್ಮಾನಗಳು

98 ರ ಡಿಸೆಂಬರ್ 28,29 ರಂದು ತಿರುಮಲೆಯಲ್ಲಿ ನಡೆದ ತಿ. ತಿ ದೇವಸ್ಥಾನಗಳ ಧರ್ಮಕರ್ತರ ಮಂಡಳಿಯ ತೀರ್ಮಾನಗಳ ಬಗ್ಗೆ ತಿ ತಿ.ದೇ ಪೌರ ಸಂಬಂಧಾಧಿಕಾರಿ ಶ್ರೀ 'ಸುಭಾಷ್‌ಗೌಡ್ ಅವರು ಪತ್ರಿಕಾಪ್ರಕಟನೆಯನ್ನು ಹೊರಡಿಸಿದ್ದಾರೆ

ಗುಂಟೂರು ಜಿಲ್ಲೆಯ ಬಾಪಟ್ಲದಲ್ಲಿ 26.50 ಲಕ್ಷ ರೂಗಳ ವೆಚ್ಚದಲ್ಲಿ, ಶ್ರೀಕಾಕುಳಂ ಜಿಲ್ಲೆಯ ಸೋಂಪೇಟೆಯಲ್ಲಿಯೂ, ಪೂರ್ವಗೋದಾವರೀ ಜಿಲ್ಲೆ ಕೊತ್ತ ಪೇಟೆಯಲ್ಲಿಯೂ ರೂ 18 ಲಕ್ಷ ರೂಗಳ ವೆಚ್ಚದಲ್ಲಿ ಹೊಸ ಕಲ್ಯಾಣ ಮಂಟಪಗಳನ್ನು ನಿರ್ಮಿಸಲು ತೀರ್ಮಾನಿಸಲಾಗಿದೆ

ಹೈದರಾಬಾದು ಹಾಗೂ ಮಂಡಲಕೇಂದ್ರಗಳಲ್ಲಿರುವ ಕಲ್ಯಾಣಮಂಟಪಗಳ ಹೊರತು ಮಿಕ್ಕ ಕಲ್ಯಾಣ ಮಂಟಪಗಳ ದಿನವಹಿ ಬಾಡಿಗೆಯನ್ನು ಹೆಚ್ಚಿಸಲು ತೀರ್ಮಾನಿಸಲಾಗಿದೆ ಆದರೆ ಹಿಂದೂ ಧಾರ್ಮಿಕ ಆಧ್ಯಾತ್ಮಿಕ ಕಾರ್ಯಕ್ರಮಗಳಿಗೆ ಮಾತ್ರ ಈಗಿರುವಂತೆಯೇ ಈ ಕಲ್ಯಾಣಮಂಟಪಗಳನ್ನು ನೀಡಬೇಕೆಂದೂ ತೀರ್ಮಾನಿಸಲಾಗಿವೆ

## ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ.ಕೆ.ಆರ್. ವಿನಾಯಕ್ ಹಾರ್ದಿಕ ಬೀಳ್ಕೊಡುಗೆ.

ತಿರುಮಲೆ - ತಿರುಪತಿ ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿಯಾಗಿ 1996 ರ ಸೆಪ್ಟಂಬರ್ 12 ರಿಂದ ಎರಡುವರ್ಷಕಾಲ ತಿ ತಿ ದೇ ಅಭಿವೃದ್ಧಿಗಾಗಿ ದುಡಿದ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ಕೆ ಆರ್ ವಿನಾಯಕರು ತಮ್ಮ ಸ್ಥಾನದಲ್ಲಿ ನಿಯುಕ್ತಿ ಹೊಂದಿದ ಡಾ|| ಐ ವಿ ಸುಬ್ಬಾರಾವ್, ಐ ಎ ಎಸ್ ಅವರಿಗೆ ತಮ್ಮ ಪದವಿ ಬಾಧ್ಯತೆಗಳನ್ನು ಒಪ್ಪಿಸಿದ ನಂತರ ತಮ್ಮ ಹೊಸ ಸ್ಥಾನವನ್ನು ವಹಿಸಿಕೊಳ್ಳಲು ಹೈದರಾಬಾದಿಗೆ ಹಿಂದಿರುಗಿದರು ಸ್ವಾಮಿ ಸನ್ನಿಧಿಯಲ್ಲಿ ತಿ ತಿ ದೇ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಮುಂತಾದ ಅಧಿಕಾರಿಗಳು ಅವರಿಗೆ ಹಾರ್ದಿಕವಾಗಿ ಬೀಳ್ಕೊಡುಗೆ ನೀಡಿದರು ಶ್ರೀಯುತರಿಗೆ ಸ್ವಾಮಿಯ ಶೇಷವಸ್ತ್ರ ಸನ್ಮಾನ ನಡೆದು, ಪ್ರಸಾದ ನೀಡಲಾಯಿತು ವೇದ ಪಂಡಿತರು ಘನವಾಗಿ ಆಶೀರ್ವದಿಸಿದರು



## ಗೀತಾವಧಾನ

ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರ ದಲ್ಲಿ ಡಿಸೆಂಬರ್ 2 ರಿಂದ 4 ರ ವರೆಗೆ ಭಾಗ ವತಂ ಪ್ರಾಜೆಕ್ಟ್ ನೇತೃತ್ವದಲ್ಲಿ ನಡೆದ ಗೀತಾಜ ಯಂತಿ ಕಾರ್ಯಕ್ರಮಗಳಲ್ಲಿ ವಿಶಿಷ್ಟವಾದ ಗೀತಾವ ಧಾನ ಕಾರ್ಯಕ್ರಮವೂ ಸಂಪನ್ನವಾಯಿತು ಡಿಸೆಂ ಬರ್ 4 ರಂದು ಶ್ರೀ ಮುದಿವರ್ತಿ ಕೊಂಡಮಾ ಚಾರ್ಯರ ಅಧ್ಯಕ್ಷತೆಯಲ್ಲಿ ನಡೆದ ಗೀತಾವಧಾನ ಕಾರ್ಯಕ್ರಮದಲ್ಲಿ ಗೀತಾವಧಾನಿ ಶ್ರೀ ತಕ್ಕೆಳ್ಳ ಪಾಟಿ ಚೆನ್ನಸ್ವಾಮಿನಾಯುಡು ಅವರು ಪೃಚ್ಛಕರನ್ನೂ ಸಭಿ ಕರನ್ನೂ ಸಂಭ್ರಮಾಶ್ಚರ್ಯಗಳಿಂದ ತುಂಬಿ, ಆನಂ ದದಲ್ಲಿ ತೇಲಾಡುವಂತೆ ಕಾರ್ಯಕ್ರಮವನ್ನು ನಡೆ ಸಿಕೊಟ್ಟರು ಭಗವದ್ಗೀತೆಯಲ್ಲಿನ ಶ್ಲೋಕಸಂಖ್ಯೆ ಯನ್ನು ಹೇಳಿದರೂ - ಶ್ಲೋಕ ಭಾವವನ್ನು ಹೇಳಿ ದರೂ, ಶ್ಲೋಕಾದಿ ಪದವನ್ನು ಹೇಳಿದರೂ ಶ್ಲೋಕ ವನ್ನು ಪೂರ್ತಿಯಾಗಿ ಹೇಳಿ ವ್ಯಾಖ್ಯಾನ ಮಾಡುವ ಅಸಾಧಾರಣ ಪ್ರತಿಭೆಯನ್ನು ತೋರಿಸುತ್ತ ನಡೆದ ಗೀತಾವಧಾನಿ ಶ್ಲೋಕಾಂತ್ಯ ಪದ, ಶ್ಲೋಕ ಮಧ್ಯ ಪದಗಳಿಂದಲೂ ಶ್ಲೋಕಗಳನ್ನು ಗುರುತಿಸುತ್ತ ನಡೆ ದರು ಎಪ್ಪತ್ತು ವರ್ಷದ ರೈತರಾದ ಶ್ರೀ ಚೆನ್ನಸ್ವಾಮಿ ನಾಯುಡು ಅವರ ಪ್ರತಿಭಾ ಪಾಟವವನ್ನು ಕುರಿತು, ಸಹಸ್ರಾವಧಾನಿ ಡಾ|| ಮೇಡಸಾನಿ ಮೋಹನ್ ಅವರು ಮೊದಲಿಗೆ ಪರಿಚಯ ಮಾಡಿಕೊಟ್ಟರು



ಕಾರ್ಯಕ್ರಮದಲ್ಲಿ ಡಾ|| ಕೆ ನಲಚಕ್ರವರ್ತಿ, ಡಾ|| ವಿಭೀಷಣಶರ್ಮ, ಡಾ|| ಚೆನ್ನಕೇಶವುಲು ನಾಯುಡು, ಡಾ|| ರಾಜಗೋಪಾಲನ್, ಶ್ರೀ ಶಾರ್ಙ್ಗ ಪಾಣಿ, ಶ್ರೀ ದಶರಥ ಅವರುಗಳು ಪೃಚ್ಛಕರಾಗಿ ಪಾಲುಗೊಂಡರು



## ಡಾ|| ಸಂಗಮೇಶಂ ಅವರಿಗೆ ಸನ್ಮಾನ

ದೆಹಲಿಯ ಕೇಂದ್ರೀಯ ಹಿಂದಿ ನಿರ್ದೇಶನಾಲ ಯದವರು 1997 - 98 ರ ವರ್ಷದಲ್ಲಿ ಹಿಂದಿ ಸಾಹಿತ್ಯ ಸೇವೆಗಾಗಿ ಹಿಂದಿ ಭಾಷೇತರರಿಗಾಗಿ ನೀಡ ಲಾಗುವ ಸಾಹಿತ್ಯ ಸಮ್ಮಾನವನ್ನು ತಿರುಪತಿಯ ಡಾ|| ಮುಟ್ಟೂರಿ ಸಂಗಮೇಶಂ ಅವರಿಗೆ ನೀಡಿ ಸತ್ಕರಿಸಿ ದ್ದಾರೆ. ಹಿಂದಿ ಭಾಷೆಯಲ್ಲಿ ಮಾತ್ರವಲ್ಲದೆ ತೆಲುಗು ಆಂಗ್ಲ ಭಾಷೆಗಳಲ್ಲಿಯೂ ಗ್ರಂಥ ರಚನೆ ಮಾಡಿ ಪ್ರಸಿ ದ್ಧರಾಗಿರುವ ಡಾ|| ಸಂಗಮೇಶಂ ಅವರು 'ಗೋದಾ ಪರಿಣಯಂ' ಹಿಂದಿ ಕೃತಿಗೆ ಹಿಂದಿ ನಿರ್ದೇಶನಾ ಲಯದ ಸನ್ಮಾನ ಪ್ರಾಪ್ತವಾಗಿದ್ದು ಈ ಸನ್ಮಾನದಲ್ಲಿ ರೂ 25000/- ನಗದು ಹಾಗೂ ಪ್ರಶಸ್ತಿ ಪತ್ರಗಳು ಸೇರಿವೆ.

ಶ್ರೀಯುತರು ತಿ ತಿ.ದೇ ಧಾರ್ಮಿಕ ಗ್ರಂಥ ಪ್ರಕಾ ಶನ ಸಾಹಯ್ಯಧನ ಪರಿಣತ ಸಮಿತಿಯ ಸದಸ್ಯರಾಗಿ ಪ್ರಸ್ತುತ ಸೇವೆ ಸಲ್ಲಿಸುತ್ತಿದ್ದಾರೆ

## ಸ್ವಾಮಿ ಆರಾಧನೆಯಲ್ಲಿ ಶ್ರೀ ಜಸ್ವಂತ್‌ಸಿಂಗ್

ಭಾರತದ ವಿದೇಶಾಂಗ ಮಂತ್ರಿ ಶ್ರೀ ಜಸ್ವನ್ತ್ ಸಿಂಗ್ ಅವರು ಕುಟುಂಬ ಸಹಿತರಾಗಿ ತಿರುಮಲೆಗೆ ಜನವರಿ 20 ರಂದು ಸಂಜೆ ಆಗಮಿಸಿ ಶ್ರೀ ವೆಂಕ ಟೇಶ್ವರಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು

ಅವರು ಸಕುಟುಂಬರಾಗಿ ಆಲಯಕ್ಕೆ ಬಂದಾಗ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವ್, ಜೆ ಇ ಓ ಶ್ರೀ ರಾಮಕೃಷ್ಣಯ್ಯ ಮುಂತಾದವರು ಸಂಪ್ರದಾಯ ರೀತ್ಯಾ ಸ್ವಾಗತಿಸಿ ದರು ಸ್ವಾಮಿ ಪ್ರಸಾದಗಳನ್ನೂ, ತಿ ತಿ ದೇ ಧ್ವನಿ ಸುರುಳಿ, ಚಲನ ಚಿತ್ರ ಸುರುಳಿಗಳನ್ನೂ ಪುಸ್ತಕಗ ಳನ್ನೂ ಅವರಿಗೆ ತಿ ತಿ ದೇ ಕಾರ್ಯನಿರ್ವಹಣಾಧಿ ಕಾರಿ ನೀಡಿದರು

ವಿದೇಶಾಂಗ ಮಂತ್ರಿಗಳು ಅಂದು ತಿರುಮಲ ಯಲ್ಲಿ ಇದ್ದು ಮಾರನೆಯ ದಿನ ಬೆಳಗ್ಗೆ ತಿರುಚಾ ನೂರಿಗೆ ಬಂದು ಶ್ರೀ ಪದ್ಮಾವತೀ ಅಮ್ಮನವರನ್ನು ಸಂದರ್ಶಿಸಿದರು

# ಸ್ವಾಗತ - ಬೀಳ್ಕೊಡುಗೆ



ಭೂಲೋಕ ವೈಕುಂಠವೆಂದು ಹೆಸರಾಗಿರುವ ತಿರುಮಲೆಯ ದೇವಸ್ಥಾನದ ಆಡಳಿತ ಒಂದು ಕಿರಿಯ ಸಂಸ್ಥಾನದ ಆಡಳಿತದಷ್ಟೇ ಹೌದು ಇಲ್ಲಿನ ಹಲವಾರು ಆಲಯಗಳು, ಅವುಗಳ ದಿನನಿತ್ಯದ ಪೂಜೆ ಉತ್ಸವಗಳು, ಮುಖ್ಯವಾಗಿ ತಿರುಮಲೆಯ ಆಲಯ, ಅದರ ದಿನ ವಾರ ಪಕ್ಷ ಮಾಸ ವಾರ್ಷಿಕ ಉತ್ಸವಗಳದ್ದೇ ಒಂದು ಪ್ರತ್ಯೇಕ ಗ್ರಂಥವಾದೀತು ಜೊತೆಗೇ ಇಲ್ಲಿಗೆ ದಿನವೂ ಆಗಮಿಸುವ ಅರ್ಧಲಕ್ಷಕ್ಕಿಂತ ಹೆಚ್ಚಿನ ಭಕ್ತ ಯಾತ್ರಿಕರ ಅಗತ್ಯಗಳು, ಈ ಒಂದು ಜನ ಸಾಗರದಲೆಗಳ ವ್ಯವಸ್ಥಿತ ದರ್ಶನ ಅಶನ, ವಸತಿ, ಮರುಪ್ರಯಾಣ, ಈ ಮಧ್ಯದ ಶಾಂತಿ, ಸೌಹಾರ್ದ, ಸೌಧರ್ಮ್ಯ ಮೊದಲಾದವುಗಳ ದಿನನಿತ್ಯದ ಸೇವೆಯಾಗಿ ಉದ್ಯೋಗವಾಗಿ ಸ್ವೀಕರಿಸುವ ಹೊಣೆಯನ್ನು ಹೊತ್ತು ಹೊಸದಾಗಿ ಕಾರ್ಯನಿರ್ವಹಣಾಧಿಕಾರಿ ಆಗಿ ಅಧಿಕಾರ ಸ್ವೀಕರಿಸಿರುವ ಐ ಎ ಎಸ್ ಅಧಿಕಾರಿ ಡಾ|| ಇಲಪಾವುಲೂರಿ ವೆಂಕಟಸುಬ್ಬರಾವು ಅವರು ಸಪ್ತಗಿರಿ ಮಾಸಪತ್ರಿಕೆಯ ಗೌರವ ಸಂಪಾದಕರೂ ಹೌದು ಅವರಿಗೆ ಸ್ವಾಗತ

ಯುವಕರಾದ ಡಾ|| ಸುಬ್ಬಾರಾವು ಅವರು ವಿದ್ಯಾವಿನಯ ಸಂಪನ್ನತೆಯೊಂದಿಗೆ ಆಡಳಿತ ದಕ್ಷರೆಂದೂ ಹೆಸರುಪಡೆದವರು ಆಧ್ಯಾತ್ಮಿಕ, ಧಾರ್ಮಿಕ ಸಾಹಿತ್ಯ ಪ್ರಿಯರಾಗಿಯೂ, ವಿದ್ವಾಂಸ ವಾತಾವರಣದಲ್ಲಿ ಬೆಳೆದವರು ಸೌಮ್ಯ ಸಹೃದಯರು ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದ ಸ್ಥಳೀಯ ಪರಿಸ್ಥಿತಿ, ಪರಿಪಾಟಿಗಳನ್ನು ಅರಿಯದವರೇನಲ್ಲ ಈ ಹಿಂದೆ ಚಿತ್ತೂರು ಜಿಲ್ಲೆಯ ಜಿಲ್ಲಾಧಿಕಾರಿಗಳಾಗಿ ಕೆಲಸ ಮಾಡಿ, ಇಡೀ ಜಿಲ್ಲೆಯ - ಪ್ರಧಾನವಾಗಿ ತಿರುಪತಿ - ತಿರುಮಲೆಗಳಲ್ಲಿನ ಯಾತ್ರಿಕ, ಆ ಮೂಲಕವಾದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಓರೆ ಕೋರೆಗಳನ್ನು ಒಲವು ನಿಲುವುಗಳನ್ನು ಸ್ಥೂಲವಾಗಿ ತಿಳಿದವರೇ ಆಗಿದ್ದಾರೆ

1999 ರ ಜನವರಿ 1 ರಂದು ಪದವಿಯ ಹೊಣೆಯನ್ನು ಒಪ್ಪಿಕೊಂಡ ಕೂಡಲೇ, ಯಾತ್ರಿಕರಿಗೆ ನಿರಂತರವಾಗಿ ತಿರುಮಲೆಗೆ ಆಗಮಿಸುವ ಯಾತ್ರಿಕರಿಗೆ - ಹೆಚ್ಚಿನ ಸೌಲಭ್ಯ ಸೌಕರ್ಯಗಳಿಂದ ಕೂಡಿದ ಸೇವೆಯನ್ನು ಸಲ್ಲಿಸುವಂತೆ ಮಾಡುವುದೇ ತಮ್ಮ ಉದ್ಯೋಗ ಧ್ಯೇಯವೆಂದೂ, ಎಷ್ಟು ಸೇವೆಯನ್ನು ಸಲ್ಲಿಸಿದರೂ ಇನ್ನೂ ಮಾಡಬೇಕಾದ ಸೇವಾಕಾರ್ಯ ಮಿಕ್ಕಿರುತ್ತದೆ ಎಂಬುದೇ ತಮ್ಮ ಆದರ್ಶವೆಂದೂ ತಿಳಿಸುತ್ತ, ಶ್ರೀಕ್ಷೇತ್ರದ ಸಂಪ್ರದಾಯಾನುಗುಣವಾಗಿ ಹೊಸ ಹೊಸ ತಂತ್ರಜ್ಞಾನದೊಡನೆ ಸರಿದೆರೆತ ಆಡಳಿತ ನಡೆಸುವುದಾಗಿ ಹೇಳುವಲ್ಲಿ ಅವರ ಸೇವಾತತ್ಪರತೆ ಕಂಡುಬರುತ್ತದೆ

ಸಾಹಿತ್ಯಾಭಿಮಾನಿಗಳೂ, ಸಹೃದಯರೂ ಆದ ಅವರ ಗೌರವ ಸಂಪಾದಕತ್ವದಲ್ಲಿ ಸಪ್ತಗಿರಿ ಪತ್ರಿಕೆ ಸರ್ವಾಂಗ ಸುಂದರವಾಗಿ ಮತ್ತೂ ಹೆಚ್ಚಿನ ಶೋಭೆಯನ್ನು ಪಡೆದು ಹೊರಬರುವುದೆಂದೂ, ತಿ ತಿ ದೇವಸ್ಥಾನಗಳ ಧಾರ್ಮಿಕ ಪ್ರಕಟಣೆಗಳು ಮತ್ತೂ ಇಮ್ಮಡಿ ಮುಮ್ಮಡಿಯಾಗಿ ಹೊರ ಬಂದು ಅವರ ಆಡಳಿತದಿಂದಾಗಿ ತಿರುಮಲ ತಿರುಪತಿ ದೇವಸ್ಥಾನಗಳು ಅಭಿವೃದ್ಧಿ ಪಥದಲ್ಲಿ ಸಾಗಿದಂತೆಯೇ ಅವರ ಸಾಹಿತ್ಯಾಶ್ರಯದಿಂದಾಗಿ ಇಡಿ ಜನತೆಯ, ನಾಡಿನ ಶಾಂತಿ, ಸೌಹಾರ್ದ, ಸಮತೆಗಳು ಹೆಚ್ಚಲೆಂದು ಆಶಿಸುತ್ತ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಗಳೂ, ಸಪ್ತಗಿರಿಯ ಗೌರವ ಸಂಪಾದಕರೂ ಆದ ಡಾ|| ಐ ವಿ ಸುಬ್ಬರಾವು ಅವರನ್ನು ಸಪ್ತಗಿರಿ ಸಾದರದಿಂದ ಸ್ವಾಗತಿಸುತ್ತದೆ



ತಿರುಮಲೆ - ತಿರುಪತಿ ದೇವಸ್ಥಾನಗಳಲ್ಲಿ ಎರಡು ವರ್ಷಗಳಿಗಿಂತ ಹೆಚ್ಚು ಕಾಲ ಯಶಸ್ವಿಯಾಗಿ ಕಾರ್ಯನಿರ್ವಹಣಾಧಿಕಾರಿಗಳಾಗಿ ಆಡಳಿತ ನಡೆಸಿದ ಐ ಎ ಎಸ್ ಅಧಿಕಾರಿ ಶ್ರೀಯುತ ಮಿಕ್ಕಿಲಿನೇನಿ ಕ್ಷೀರ ರಾಮಲಿಂಗೇಶ್ವರ ವಿನಾಯಕರು ತಿ ತಿ ದೇ ಆಡಳಿತವನ್ನು ಮತ್ತೊಬ್ಬರಿಗೆ ಒಪ್ಪಿಸಿ ನಡೆದಿದ್ದಾರೆ ಸಪ್ತಗಿರಿ ಮಾಸಪತ್ರಿಕೆಯ ಗೌರವ ಸಂಪಾದಕರೂ ಆಗಿದ್ದ ಅವರಿಗೆ ಸಪ್ತಗಿರಿ ಹಾರ್ದಿಕವಾದ ಬೀಳ್ಕೊಡುಗೆಯನ್ನು ಬಯಸುತ್ತದೆ

ಆಡಳಿತ ದಕ್ಷರೆಂದು ಹೆಸರು ಪಡೆದೇ ತಿ ತಿ ದೇ ಗಳನ್ನು ಪ್ರವೇಶಿಸಿದರು ಇಲ್ಲಿ ಅವರ ದಕ್ಷತೆಗೆ ಸ್ವಾಮಿಯ ಅನುಗ್ರಹವೂ ಸೇರಿ ಒಂದು ಆಡಳಿತ ಯಂತ್ರಾಂಗ ಚುರುಕಾಯಿತೆನ್ನಬೇಕು ಹೆಚ್ಚು ಹೆಚ್ಚು ಕಂಪ್ಯೂಟರೀಕರಣಗೊಳಿಸುತ್ತ ನಡೆದಂತೆ, ಹೊಸ ಹೊಸ ಯೋಜನೆಗಳೂ ಉಂಟಾದವು. ಆಕಾಶಗಂಗೆಯ ಕುಡಿಯುವ ನೀರಿನ ಯೋಜನೆ, ಎರಡನೇ ಕ್ಯೂಕಾಂಪ್ಲೆಕ್ಸ್ ಭವನ, ಶ್ರೀ ಪದ್ಮಾವತೀ ಅಮ್ಮನವರ ವಜ್ರಕಿರೀಟ ಮೊದಲಾದ ಹಲವಾರು ಕೆಲಸಗಳು ಇವರ ಕಾಲದಲ್ಲಿ ಆರಂಭವಾದವು. ಇವರ ಕಾಲದಲ್ಲಿ ಹಲವಾರು ಹೊಸ ಹೊಸ ಸುಧಾರಣೆಗಳೂ ನಡೆದವು.

ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಯಾಗಿ ಮಾತ್ರವೇ ಅಲ್ಲದೆ ಸಪ್ತಗಿರಿಯ ಗೌರವ ಸಂಪಾದಕರಾಗಿಯೂ ಶ್ರೀಯುತರ ಕೆಲಸ ಅನನ್ಯವಾಗಿದ್ದಿತೆಂದರೆ ಅಚ್ಚರಿಯಲ್ಲ ಸಕಾಲದಲ್ಲಿ ಸಪ್ತಗಿರಿ ಬರುವಂತೆ ಆದದ್ದೇ ಅಲ್ಲದ ಅವರ ಸರಬರಾಜು ಚೆನ್ನಾಗಿ ನಡೆಯಲು ಕಂಪ್ಯೂಟರ್‌ಗಳನ್ನೂ ಹೊಂದಿಸಲಾಯಿತು. ಜೊತೆಗೇ ಧಾರ್ಮಿಕ ಗ್ರಂಥ ಪ್ರಕಟನೆ ಹೊಸ ಹೊಗರನ್ನು ಪಡೆಯಿತೆಂದರೆ ಅತಿಶಯವಾಗದು ತಿ ತಿ ದೇ ಶಾಸನ ಸಂಪುಟಗಳು, ಅನ್ನಮಾಚಾರ್ಯ ಸಂಕೀರ್ತನೆಯ ಸಂಪುಟಗಳು, ಭಾಗವತ ಸಂಪುಟಗಳು, ಭಗವದ್ಗೀತೆ, ಪುರಂದರೋಪನಿಷತ್ ಮೊದಲಾದ ಪುನರ್ಮುದ್ರಣಗಳೂ ಭರದಿಂದ ಸಾಗಿದವು. ಹೊಸ ಪುಸ್ತಕಗಳೂ ಹೆಚ್ಚು ಹೊರಬಂದವು. ಇವೆಲ್ಲ ಶ್ರೀಯುತರ ಆಡಳಿತ ಕ್ಷಮತೆ, ಸಾಹಿತ್ಯದ ಬಗ್ಗೆ ಅದಮ್ಯ ಅಭಿಮಾನಗಳನ್ನೇ ಸೂಚಿಸುತ್ತವೆ

ಅವರು ಶ್ರೀ ವೆಂಕಟೇಶ್ವರಸ್ವಾಮಿಯ ಭಕ್ತರಾಗಿದ್ದಂತೆಯೇ ಯಾತ್ರಿಕ ಸೇವೆಯಲ್ಲೂ ಸತತವಾದ ಆಸಕ್ತಿ ಹೊಂದಿದ್ದರು ಯಾತ್ರಿಕರ ಕುಂದು ಕೊರತೆಗಳ ನಿವಾರಣೆಯಲ್ಲಿ ಶ್ರದ್ಧಾಭಕ್ತಿಗಳಿಂದಲೂ, ಅಧಿಕಾರದಿಂದಲೂ ಭಾಗವಹಿಸಿದ್ದರು

ಅಂತಹ ಸಹೃದಯರೂ, ಸಹಾನುಭೂತಿಪರರೂ, ಸಾಹಿತ್ಯಾಭಿಮಾನಿಗಳೂ ಆದ ಶ್ರೀ ಎಂ ಕೆ ಆರ್ ವಿನಾಯಕರೂ ಅವರ ಕುಟುಂಬವರ್ಗವೂ ಸಪ್ತಗಿರೀಶನ ಕೃಪಾಸಾಗರದಲ್ಲಿ ಕ್ಷೇಮಲಾಭಗಳಿಂದ ಕೂಡಿರಲೆಂದು ಸಪ್ತಗಿರಿ ಹಾರೈಸುತ್ತವೆ

## ಕಾಣಿಯೂರು ಮಠದ ಶ್ರೀಗಳ ನಿಧನ

ಉಡುಪಿಯ ಶ್ರೀಕೃಷ್ಣ ಪೂಜೆಯ ಹೊಣೆಯನ್ನು ಹೊತ್ತಿದ್ದ ಪರ್ಯಾಯಮಠವಾದ ಕಾಣಿಯೂರು ಮಠದ ಶ್ರೀ ಶ್ರೀ ವಿದ್ಯಾವಾರಿನಿಧಿ ತೀರ್ಥ ಶ್ರೀಪಾದಂಗಳವರು 1998 ರ ವೈಕುಂಠ ಏಕಾದಶಿಯಂದು (29-12-98) ಶ್ರೀಕೃಷ್ಣ ಪೂಜೆಯನಂತರ ಹೃದಯಾಘಾತದಿಂದ ಹರಿಪಾದವನ್ನು ಸೇರಿದರು ಎಂದು ತಿಳಿಸಲು ವಿಷಾದವಾಗುತ್ತದೆ.

ನರಹರಿ ಎಂಬ ಪೂರ್ವಾಶ್ರಮ ನಾಮದ ಶ್ರೀ ಶ್ರೀ ವಿದ್ಯಾವಾರಿನಿಧಿತೀರ್ಥರು ತಮ್ಮ ಎಂಟನೆಯ ವಯಸ್ಸಿನಲ್ಲಿ ಕಾಣಿಯೂರು ಮಠದ ಶ್ರೀ ಶ್ರೀ ವಿದ್ಯಾ ಸಮುದ್ರತೀರ್ಥರಿಂದ ಸನ್ಯಾಸ ದೀಕ್ಷೆಯನ್ನು ಪಡೆದು, ಮೂರು ಬಾರಿ ಉಡುಪಿಯ ಕೃಷ್ಣಪೂಜೆಯ ಪರ್ಯಾಯ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿ ಪುನಃ ನಾಲ್ಕನೆಯ ಬಾರಿಗೆ 18-1-98 ರಂದು ಪರ್ಯಾಯ ಪೀಠವನ್ನೇರಿದ್ದರು (ಈ ಪರ್ಯಾಯ 17-1-2000 ದಲ್ಲಿ ಕೊನೆಗೊಳ್ಳಬೇಕು) ಅದ್ವಿತೀಯ ಗೋ ಸಂರಕ್ಷಕರೆಂದು ಹೆಸರಾದ ಶ್ರೀಪಾದರು ಉಡುಪಿಯಲ್ಲಿ ಕಳೆದ ನವಂಬರ್ ತಿಂಗಳಲ್ಲಿ ನವೀಕೃತ ಗೋಶಾಲೆಯನ್ನು ಉದ್ಘಾಟಿಸಿ ಶ್ರೀಕೃಷ್ಣನಿಗೆ ಅರ್ಪಿಸಿದ್ದರು

ವೈಕುಂಠ ಏಕಾದಶಿಯ ರಾತ್ರಿಯಲ್ಲಿಯೇ ಶ್ರೀಕೃಷ್ಣಮಠದ ವೃಂದಾವನ ಸಂಕೀರ್ಣದಲ್ಲಿ ಶ್ರೀಪಾದಂಗಳ ಪಾರ್ಥಿವ ಶರೀರದ ವೃಂದಾವನ ಪ್ರವೇಶ ನಡೆಸಲಾಯಿತು ಅಪಾರವಾದ ಭಕ್ತ ಬಂಧುಗಳೂ, ಉಡುಪಿಯ ಕೃಷ್ಣ ಪೂಜೆಯ ಇತರ ಪರ್ಯಾಯ ಪೀಠಗಳವರೂ ಉಪಸ್ಥಿತರಿದ್ದರು 30-12-98 ರಿಂದ 7-1-99 ರ ವರೆಗೆ ನಿತ್ಯಹೋಮ ನಡೆದು, ಶ್ರೀಪಾದರ ಆರಾಧನೆಯನ್ನು 7-1-99 ರಂದು ಆಚರಿಸಲಾಯಿತು ಅಂದು ಸಂಜೆ ವಸಂತ ಮಹಲಿನಲ್ಲಿ ಶ್ರದ್ಧಾಂಜಲಿ ಸಭೆಯನ್ನು ನಡೆಸಲಾಯಿತು



ಶ್ರೀ ಶ್ರೀ ವಿದ್ಯಾವಾರಿನಿಧಿ ತೀರ್ಥರ ಶ್ರದ್ಧಾಂಜಲಿ ಸಭೆ

## ಶ್ರೀ ಶ್ರೀ ವಿದ್ಯಾವಲ್ಲಭತೀರ್ಥರ ಸರ್ವಜ್ಞ ಪೀಠಾರೋಹಣ

ಶ್ರೀಕೃಷ್ಣ ಪೂಜಾ ಪರ್ಯಾಯ ಜವಾಬ್ದಾರಿಯನ್ನು ಹೊತ್ತಿದ್ದ ಕಾಣಿಯೂರು ಮಠದ ಶ್ರೀ ಶ್ರೀ ವಿದ್ಯಾವಾರಿನಿಧಿತೀರ್ಥರ ನಂತರ ಅವರ ಶಿಷ್ಯರಾದ ಶ್ರೀ ಶ್ರೀ ವಿದ್ಯಾವಲ್ಲಭ ತೀರ್ಥರು ಸರ್ವಜ್ಞ ಪೀಠವನ್ನೇರಿ ಶ್ರೀಕೃಷ್ಣ ಪೂಜೆಯ ಜವಾಬ್ದಾರಿ ಸ್ವೀಕರಿಸಿದ್ದಾರೆ.

ರಘುಪತಿ ಆಚಾರ್ಯ - ಮಾಲತೀ ದಂಪತಿಗಳ ದ್ವಿತೀಯ ಪುತ್ರರಾಗಿ 30-10-77 ರಲ್ಲಿ ಜನಿಸಿದ ಕೃಷ್ಣರಾಜ ಪೂರ್ವಾಶ್ರಮ ನಾಮಧೇಯದ ವಿದ್ಯಾವಲ್ಲಭ ತೀರ್ಥರು 8-5-92 ರಲ್ಲಿ ಪಾಜಕದಲ್ಲಿ ಶ್ರೀ ಶ್ರೀ ವಿದ್ಯಾವಾರಿನಿದಿ ತೀರ್ಥರಿಂದ ಸನ್ಯಾಸಾಶ್ರಮ ಸ್ವೀಕರಿಸಿದರು ಶ್ರೀ ಶ್ರೀ ಸತ್ಯಪ್ರಮೋದತೀರ್ಥರ ಜೊತೆ ಸಂಚಾರಮಾಡುತ್ತ ವಿದ್ಯಾಭ್ಯಾಸ ಗೈದ ಶ್ರೀಪಾದರು ಶ್ರೀ ಶ್ರೀ ವಿಶ್ವಪ್ರಸನ್ನತೀರ್ಥರಲ್ಲಿ ನ್ಯಾಯಸುಧಾ ಅಧ್ಯಯನ ನಡೆಸಿದ್ದಾರೆ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 1-1-99 ರಂದು ಬೆಳಗ್ಗೆ ಇತರ ಪರ್ಯಾಯ ಪೀಠದ ಶ್ರೀಗಳೊಡನೆ ಸೇರಿ ಶ್ರೀ ಶ್ರೀ ವಿದ್ಯಾವಲ್ಲಭ ತೀರ್ಥರನ್ನು ಸುಮುಹೂರ್ತದಲ್ಲಿ ಸರ್ವಜ್ಞ ಪೀಠದಲ್ಲಿ ಆಸೀನಗೊಳಿಸಿ 17-1-2000 ವರೆಗೆ ಪರ್ಯಾಯವನ್ನು ಯಶಸ್ವಿಯಾಗಿ ಮುಂದುವರಿಸಲು ಇತರ ಮಠಗಳ ಸಹಕಾರದ ಆಶ್ವಾಸನೆ ನೀಡುತ್ತ ಹರಸಿದರು

ವರದಿ - ಚಿತ್ರಗಳು - ಎಸ್ ಕೆ ಆಚಾರ್



ಶ್ರೀ ಶ್ರೀ ವಿದ್ಯಾವಲ್ಲಭತೀರ್ಥರ ಸರ್ವಜ್ಞ ಪೀಠಾರೋಹಣ ಮಾಡಿಸುತ್ತ ಕೈಹಿಡಿದು ನಡೆಸುವ ಶ್ರೀ ಶ್ರೀ ವಿಶ್ವೇಶ ತೀರ್ಥ ಶ್ರೀಪಾದರು

Edited and Published on behalf of T T Devasthanams by N S Rama Murthy, M A, and Printed at T T D Press by M Lakshmana Rao B A, L P T, Manager, T T D Press, Tirupati - 517 507



# ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

**ಒಂದು ವಿನಂತಿ;**

ಸಸಿಯೊಂದ ಬೆಳೆವವನು ದೇವರಾ ಸೇವಕನು
ತಲೆಮಾರು ಗಳಿಗೆಲ್ಲ ನೆರಳನವ ಹರಿಸುವನು
ಹರಸುವರು ಜನರವನ, ಅವನೆಂದು ಕಾಣದರು

ತಿರುಮಲೆಯ ಪವಿತ್ರವಾದ ಅರಣ್ಯ ಶ್ರೀ ವೆಂಕಟೇಶ್ವರಸ್ವಾಮಿಯು ಮಾನವ ಜನಾಂಗಕ್ಕೆ ನೀಡಿದ ಅಮೂಲ್ಯ ವರದಾನ ಈ ಒಂದು ಸೂಕ್ಷ್ಮವೂ ಸುಂದರವೂ ಆದ ಅರಣ್ಯ ಪರಿಸರ ರಕ್ಷಣೆ ಮಾಡಲೆಂದು ತಿರುಮಲೆ - ತಿರುಪತಿ ದೇವಸ್ಥಾನಗಳವರು ಉತ್ತಮವಾದ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯನ್ನು ಆರಂಭಿಸಿದ್ದಾರೆ ಈ ವನಾಬಿವೃದ್ಧಿಯೋಜನಯ ಹಲವು ವಿವರಗಳು ಹೀಗೆ ಇವೆ

## ವೃಕ್ಷ ಸಂವರ್ಧನೆ

ಈ ಯೋಜನೆಯನ್ವಯ ಪವಿತ್ರವಾದ ಸಪ್ತಗಿರಿಗಳಲ್ಲಿ ಐದುನೂರು ಗಿಡಗಳನ್ನು ನೆಡಲಾಗುವುದು

ಪ್ರಯೋಜನಗಳು
* ಗಿಡಗಳ ಈ ತೋಪಿಗೆ ದಾನಿಯು ಅಪೇಕ್ಷಿಸಿದ ಹೆಸರನ್ನಿಡಲಾಗುವುದು
* ಗಿಡಗಳನ್ನು ಐದುವರ್ಷಗಳ ವರೆಗೆ ಆರೈಕೆ ಮಾಡಿ ನೋಡಿಕೊಳ್ಳಲಾಗುವುದು
* ನೂರು ಶತಾಂಶ ಆದಾಯಕರ ಮುಕ್ತವಾದದ್ದು ಈ ದಾನ

ದಾನದ ಮೊಬಲಗು **ರೂ. 25000.**

## ವೃಕ್ಷ ಪ್ರಸಾದ

ಈ ಯೋಜನೆಯನ್ವಯ ತಿರುಮಲೆಯಲ್ಲಿ ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಗಿಡಗಳನ್ನು ಬೆಳೆಸಲಾಗುವುದು

ಪ್ರಯೋಜನಗಳು
* ಪ್ರತಿವರ್ಷ ದಾನಿಯ ಹೆಸರಿನಲ್ಲಿ ನೂರು ಹೂ ಹಣ್ಣು ಬೆಳೆಯುವ ಗಿಡಗಳನ್ನು ವಿತರಿಸುವುದು
* ಹತ್ತು ವರ್ಷಗಳವರೆಗೆ ಪ್ರತಿವರ್ಷ ಹಂಚುವಿಕೆ
* ನೂರು ಶತಾಂಶ ಆದಾಯಕರ ಮುಕ್ತವಾದದ್ದು ಈ ದಾನ

ದಾನದ ಮೊಬಲಗು . **ರೂ. 15000.**

## ಸ್ಮಾರಕ ವನಗಳು

ಈ ಯೋಜನೆಯಡಿಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಸಪ್ತಗಿರಿಗಳಲ್ಲಿ ಯಾವುದಾದರೂ ಒಂದು ಜಾತಿಯ ಹತ್ತು ಗಿಡಗಳನ್ನು ಒಂದು ಕಡೆ ನೆಟ್ಟು ಐದು ವರ್ಷ ಬೆಳೆಸಲಾಗುವುದು

ಪ್ರಯೋಜನಗಳು
* ತೋಪಿಗೆ ದಾನಿಯ ಹೆಸರನ್ನಿಡಲಾಗುವುದು
* ಗಿಡಗಳನ್ನು ಐದು ವರ್ಷ ಆರೈಕೆಯಿಂದ ನೋಡಿಕೊಳ್ಳಲಾಗುವುದು
* ಈ ಮೊತ್ತದ ದಾನವು ನೂರು ಶತಾಂಶ ಆದಾಯಕರ ಮುಕ್ತ

ದಾನದ ಮೊಬಲಗು . **ರೂ. 5000.**

## ವನ ಸಂರಕ್ಷಣ ಭಾಗಸ್ವಾಮ್ಯ

ತಿರುಮಲೆಯ ಅರಣ್ಯಾಚ್ಛಾದನೆಯನ್ನು ರಕ್ಷಿಸಿ ಬೆಳೆಸುವ ಯೋಜನಯಿದು

ಪ್ರಯೋಜನಗಳು
* ದಾನಿಯ ಹೆಸರಿನ ಪ್ರಕಟನೆ
* ನೂರು ಶತಾಂಶ ಆದಾಯಕರ ಮುಕ್ತದಾದದ್ದು ಈ ದಾನ

ದಾನದ ಮೊಬಲಗು **ರೂ. 2000.**

ತಮ್ಮ ದಾನಗಳನ್ನು ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ - ಇವರ ಹೆಸರಿಗೆ ಡಿ ಡಿ ಯ ರೂಪದಲ್ಲಿ ಕಳುಹಿಸಿ

**ಕಾರ್ಯನಿರ್ವಹಣಾಧಿಕಾರಿ.**

* * * * *

